# ರಾಯಚೂರು ಜಿಲ್ಲಾ ಶಾಸನಸಾಹಿತ್ಯದಲ್ಲಿ ಮಹಿಳೆಯರು

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್.ಆಂಶಿಕ ಪದವಿಗಾಗಿ
ಸಲ್ಲಿಸುತ್ತಿರುವ ಸಂಪ್ರಬಂಧ)


ಸಂಶೋಧಕಿ

ಜೆ.ಎಂ.ಶಿಲ್ಪಾ

ಮಾರ್ಗದರ್ಶಕರು

ಡಾ. ಡಿ.ವಿ.ಪರಮಶಿವಮೂರ್ತಿ

ಪ್ರವಾಚಕರು





ಶಾಸನಶಾಸ್ತ್ರ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ೫೮೩ ೨೭೬

೨೦೦೯

# ರಾಯಚೂರು ಜಿಲ್ಲಾ ಶಾಸನಸಾಹಿತ್ಯದಲ್ಲಿ ಮಹಿಳೆಯರು

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್.ಆಂಶಿಕ ಪದವಿಗಾಗಿ
ಸಲ್ಲಿಸುತ್ತಿರುವ ಸಂಪ್ರಬಂಧ)



ಸಂಶೋಧಕಿ
ಜೆ.ಎಂ.ಶಿಲ್ಪಾ

ಮಾರ್ಗದರ್ಶಕರು
ಡಾ. ಡಿ.ವಿ.ಪರಮಶಿವಮೂರ್ತಿ
ಪ್ರವಾಚಕರು





ಶಾಸನಶಾಸ್ತ್ರ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೯

# ರಾಯಚೂರು ಜಿಲ್ಲಾ ಶಾಸನಸಾಹಿತ್ಯದಲ್ಲಿ ಮಹಿಳೆಯರು

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್.ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ)



ಶಾಸನಶಾಸ್ತ್ರ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೯

## ಸಂಶೋಧಕರ ಪ್ರಮಾಣ ಪತ್ರ

ರಾಯಚೂರು ಜಿಲ್ಲಾ ಶಾಸನಸಾಹಿತ್ಯದಲ್ಲಿ ಮಹಿಳೆಯರು ಎಂಬ ಸಂಪ್ರಬಂಧವನ್ನು ಡಾ.ಡಿ.ವಿ.ಪರಮಶಿವಮೂರ್ತಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

J.M. [signature]

ಸ್ಥಳ : ವಿದ್ಯಾರಣ್ಯ

ದಿನಾಂಕ : 08-10-2009

ಜೆ.ಎಂ. ಶಿಲ್ಪಾ
ಸಂಶೋಧಕಿ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಮಾರ್ಗದರ್ಶಕರ ದೃಢೀಕರಣ ಪತ್ರ

ರಾಯಚೂರು ಜಿಲ್ಲಾ ಶಾಸನಸಾಹಿತ್ಯದಲ್ಲಿ ಮಹಿಳೆಯರು ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ ಜೆ.ಎಂ.ಶಿಲ್ಪಾ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಡಿ.ವಿ.ಪರಮಶಿವಮೂರ್ತಿ
ಮಾರ್ಗದರ್ಶಕರು ಮತ್ತು ಪ್ರವಾಚಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ

ದಿನಾಂಕ : ೮-೧೦-೨೦೦೮

# ಪರಿವಿಡಿ

# ಪ್ರಸ್ತಾವನೆ

ಮಾನವ ಸಂಘಜೀವಿ ಎಂಬುದಕ್ಕೆ ಪ್ರಬಲ ಕಾರಣವೆಂದರೆ ಅವನಾಡುವ ಭಾಷೆ. ಇದರಿಂದಾಗಿ ಮಾನವ ತನ್ನ ಅನುಭವಗಳನ್ನು ಇತರರೊಂದಿಗೆ ಹಂಚಿಕೊಳ್ಳಲು ಹಾಗೂ ಒಂದೆಡೆ ಕೂಡಿ ಜೀವಿಸಲು ಸಾಧ್ಯವಾಯಿತು. ಭಾಷೆ ಮನುಷ್ಯನಿಗೆ ದೈವದತ್ತವಾಗಿ ಬಂದಂತಹ ಅಮೂಲ್ಯವಾದ ಕೊಡುಗೆ ಎಂಬುದು ಸರ್ವವಿದಿತ. ವಿಶಿಷ್ಟ ಸಂವಹನ ಕಲೆಯಾದ ಈ ಭಾಷೆಯಿಂದಾಗಿ ಮಾನವ ಎಲ್ಲಾ ದೃಷ್ಟಿಯಿಂದಲೂ ಎಲ್ಲಾ ಕ್ಷೇತ್ರಗಳಲ್ಲಿ ಇತರ ಜೀವಿಗಳಿಗಿಂತ ವಿಭಿನ್ನವಾಗಿ ತನ್ನ ಅಸ್ತಿತ್ವವನ್ನು ಸ್ಥಾಪಿಸಿ, ಕಾಪಾಡಿಕೊಂಡು ಬಂದಿದ್ದಾನೆ. ಗೆಡ್ಡೆ-ಗೆಣಸುಗಳನ್ನು ತಿನ್ನುತ್ತಾ ಗುಹೆಗಳಲ್ಲಿ ವಾಸಿಸುತ್ತಿದ್ದ. ಆದಿ ಮಾನವನು ಹಲವಾರು ಹಂತಗಳನ್ನು ದಾಟಿ ಇಂದಿನ ಆಧುನಿಕ ಉತ್ತುಂಗ ಶಿಖರಕ್ಕೆ ತಲುಪಿದ್ದಾನೆ. ಮಾನವ ಇತರರೊಂದಿಗೆ ತನ್ನ ಸುಖ ದುಃಖಗಳನ್ನು ಹಂಚಿಕೊಂಡು ಕೂಡಿ ಬಾಳುವುದನ್ನು ಎಂದು ಕಲಿತನೋ ಅಂದಿನಿಂದಲೇ ಅವನ ಸಾಂಸ್ಕೃತಿಕ ಬದುಕು ಅನಾವರಣಗೊಂಡಿದೆ. ಇಂತಹ ಸಾಂಸ್ಕೃತಿಕ ಪರಂಪರೆಗೆ ಶ್ರೀಮಂತಿಕೆಯನ್ನು ತಂದುಕೊಟ್ಟ ಭಾರತದೇಶ ಹಲವು ಧರ್ಮಗಳ, ಹಲವು ಸಂಸ್ಕೃತಿಗಳ ತಾಯ್ನೆಲ ಎಂದರೆ ಅತಿಶಯೋಕ್ತಿಯಾಗಲಾರದು. ಭಾರತದ ಭವ್ಯ ಸಾಂಸ್ಕೃತಿಕ ವಲಯಕ್ಕೆ ಕರ್ನಾಟಕದ ಕೊಡುಗೆಯೂ ಅಪಾರವಾದುದು ಮತ್ತು ಅನುದಾನವಾದುದಾಗಿದೆ. ಸು.ಕ್ರಿ.ಪೂ.೩೦೦೦ ವರ್ಷಗಳ ಹಿಂದೆಯೇ ಸಾಂಸ್ಕೃತಿಕ ಬದುಕನ್ನು ರೂಢಿಸಿಕೊಂಡು ಬಂದಿರುವ ಕರ್ನಾಟಕಕ್ಕೆ ಮೌರ್ಯ ಅರಸ ಚಂದ್ರಗುಪ್ತಮೌರ್ಯನು ಕರ್ನಾಟಕ ಪ್ರದೇಶದ ಶ್ರವಣಬೆಳ್ಗೊಳದ ಚಂದ್ರಗಿರಿ ಬೆಟ್ಟಕ್ಕೆ ಬರುವುದರೊಂದಿಗೆ ಕರ್ನಾಟಕದ ಇತಿಹಾಸ ನಿಚ್ಚಳವಾಗಿ ಗೋಚರವಾಗುತ್ತದೆ. ಇದೇ ರೀತಿ ಚಂದ್ರಗುಪ್ತಮೌರ್ಯನ ಮೊಮ್ಮಗನಾದ ಅಶೋಕ ಸಾಮ್ರಾಟನು ಮಸ್ಕಿಯಲ್ಲಿ ಶಾಸನ ಕೊರೆಯಿಸುವುದರೊಂದಿಗೆ ರಾಯಚುರು ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ ಸ್ಪಷ್ಟ ಗೋಚರವಾಗುತ್ತದೆ. ಈ ಮೂಲಕ ರಾಷ್ಟ್ರದ ಸಾಂಸ್ಕೃತಿಕ ಪರಂಪರೆಗೆ ರಾಯಚೂರು ಜಿಲ್ಲೆಯ ಕೊಡುಗೆ ಅನನ್ಯವಾದುದು.

ಕೃಷ್ಣ ಮತ್ತು ತುಂಗಭದ್ರ ನದಿಗಳ ಮಧ್ಯದಲ್ಲಿರುವ ರಾಯಚೂರು ಜಿಲ್ಲೆ ಫಲವತ್ತಾದ ಭೂಪ್ರದೇಶವಾಗಿದೆ. ಭೌಗೋಳಿಕವಾಗಿ ಈ ಪ್ರದೇಶ ಕರ್ನಾಟಕದ ಈಶಾನ್ಯ ಭಾಗದಲ್ಲಿದ್ದು ೧೬.೧೨

ಉತ್ತರ ಆಕ್ಷಾಂಶ ಮತ್ತು ೭೭.೨೧ ಪೂರ್ವ ರೇಖಾಂಶವನ್ನು ಹೊಂದಿದೆ. ಸ್ವಾಭಾವಿಕವಾಗಿ ಎರಡು ನದಿಗಳು ಈ ಜಿಲ್ಲೆಯ ಉತ್ತರ ಮತ್ತು ದಕ್ಷಿಣ ಮೇರೆಗಳಾಗಿವೆ. ಈ ಭೂಪ್ರದೇಶವು ಹಲವಾರು ಹೆಸರುಗಳಿಂದ ಖ್ಯಾತಿ ಹೊಂದಿದೆ. ಇರ್ದೊರೆ ನಾಡು, ಹೆದ್ದೊರೆ ನಾಡು, ಎಡೆದೊರೆ ನಾಡು, ಗಂಡು ಮೆಟ್ಟಿನ ನಾಡು, ದೋ-ಆಬ್ ಪ್ರದೇಶ, ರಾಜನೂರು, ರಾಯರ ಊರು, ಪೆರ್ಮನ ರಾಚೂರು, ರಾಚ ಊರು, ರಾಚೂರು ಸೀಮೆ ಎಂಬ ವಿವಿಧ ಹೆಸರುಗಳಿಂದ ಕರೆಯಲ್ಪಡುವುದು ಈ ಜಿಲ್ಲಾ ಪ್ರದೇಶದಲ್ಲಿ ಪ್ರಾಗೈತಿಹಾಸಿಕ ಕಾಲದ ಅನೇಕ ಅವಶೇಷಗಳು ದೊರೆತಿರುವ ಬಗ್ಗೆ ಮಾಹಿತಿ ದೊರೆಯುತ್ತದೆ. ಉದಾಹರಣೆಗೆ ಮಸ್ಕಿ ಸಮೀಪದಲ್ಲಿರುವ ಬೆಣಕಲ್ಲು ಎಂಬ ಗ್ರಾಮದಲ್ಲಿ ಕಲ್ಲಿನಲ್ಲಿ ನಿರ್ಮಿತವಾದ ಮನುಷ್ಯನ ಆಕೃತಿ ಭಾರತದಲ್ಲಿಯೇ ಅತ್ಯಂತ ಹಳೆಯದೆಂದು ಹಾಗೂ ಮಸ್ಕಿ ಪಿಕಳಹಾಳಗಳ ಶಿಲಾಯುಗ, ನವಶಿಲಾಯುಗ, ತಾಮ್ರಯುಗ ಮತ್ತು ಕಬ್ಬಿಣ ಯುಗದ ಸಂಸ್ಕೃತಿಗಳ ತಾಣವೆಂದು ಕರೆಯಲು ಮಸ್ಕಿಯ ಸುತ್ತಮುತ್ತ ದೊರೆತಿರುವ ಪ್ರಾಣಿಗಳ ಎಲುಬುಗಳು ಮತ್ತು ಇತರ ಅವಶೇಷಗಳು ಸೃಷ್ಟಿಕರಿಸುತ್ತವೆ.

ರಾಯಚೂರು ಜಿಲ್ಲೆಯು ಹಲವು ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತು. ಮೌರ್ಯರಿಂದ ಪ್ರಾರಂಭವಾಗಿ ಶಾತವಾಹನರು, ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರ, ದೇವಗಿರಿಯ ಸೇವುಣರು, ಕಾಕತೀಯರು, ಕಲ್ಯಾಣ ಕಲಚೂರಿಗಳು, ವಿಜಯನಗರದ ಅರಸರು ಹಾಗೂ ಬಹುಮನಿ ಸುಲ್ತಾನರು ಇವರಲ್ಲದೇ ಅನೇಕ ಸಾಮಂತ ಅರಸರು ಈ ಜಿಲ್ಲೆಯನ್ನು ಆಳಿದ್ದಾರೆ. ಅವರುಗಳೆಂದರೆ ಕರಡಿಕಲ್ಲು, ಹೈಹಯರು, ಸಿಂಧರು, ದೇವಗಿರಿಯ ಯಾದವರು, ನಾಯಕ ಅರಸರು, ಗುಡಗುಂಟಿ ಸಂಸ್ಥಾನ, ಗುಂತಗೋಳ ಸಂಸ್ಥಾನ, ದೇವರುಗಳ ಸಂಸ್ಥಾನ ಹಾಗೂ ಹೈದ್ರಾಬಾದ್ ನಿಜಾಮರು ಈ ಎಲ್ಲಾ ರಾಜಮನೆತನಗಳು ಈ ನೆಲವನ್ನು ಆಳಿದ್ದರಿಂದ ವಿಶಿಷ್ಟವಾದ ಸಂಪ್ರದಾಯಗಳು ಜಿಲ್ಲೆಯಲ್ಲಿ ನೆಲೆಗೊಂಡಿವೆ. ಈ ನಿಟ್ಟಿನಲ್ಲಿ ರಾಯಚೂರು ಜಿಲ್ಲೆಯು ಅವಿಸ್ಮರಣೀಯವಾಗಿದೆ. ಅದರಲ್ಲೂ ವಿಶೇಷವಾಗಿ ಜಿಲ್ಲೆಯ ಮಣ್ಣಿನ ಮಹತ್ವ ಇಮ್ಮಡಿಯಾಗಿದ್ದ ವಿಜಯನಗರ ಅರಸರ ಆಳ್ವಿಕೆ ಸಂದರ್ಭದಲ್ಲಿ ಫಲವತ್ತಾದ ಈ ದೋ-ಅಬ್ ಪ್ರದೇಶಕ್ಕಾಗಿ ವಿಜಯನಗರ ಅರಸರು ಮತ್ತು ಬಹುಮನಿ ಆದಿಲ್‌ಷಾಹಿಗಳ ನಡುವೆ ಸುಮಾರು ೧೩ ಯುದ್ಧಗಳು ನಡೆದವು ಎಂಬುದರಿಂದ ಈ ಪ್ರದೇಶ ಒಂದು ರಣರಂಗವಾಗಿತ್ತು ಎಂಬುದನ್ನು ದೃಢಪಡಿಸುತ್ತದೆ.

ಸಾಮಾಜಿಕವಾಗಿ ನೋಡುವುದಾದರೆ ಈ ಜಿಲ್ಲೆಯಲ್ಲಿ ಹೆಚ್ಚಿನದಾಗಿಯೇ ಜಾತಿಪದ್ಧತಿ ಆಚರಣೆಯಲ್ಲಿತು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ಪ್ರಧಾನ ಜಾತಿಗಳಲ್ಲದೆ ಇತರ

ಒಳಪಂಗಡಗಳು ಇದ್ದವು. ಬ್ರಾಹ್ಮಣರು ತಾವು ಗಳಿಸಿದ ವಿದ್ಯೆ ಮತ್ತು ಧಾರ್ಮಿಕ ಸಂಸ್ಕೃತಾದಿಗಳ ಆಚರಣೆಯಿಂದಾಗಿ ಸಮಾಜದಲ್ಲಿ ಗೌರವಾನ್ವಿತರಾಗಿದ್ದರು. ದಾನ ಧರ್ಮದ ಜೊತೆಗೆ ಲೋಕೋಪಯೋಗಿ ಕಾರ್ಯಗಳು ನಡೆದದ್ದು ಇಲ್ಲಿನ ಅನೇಕ ಶಾಸನಗಳಿಂದ ತಿಳಿಯಬಹುದಾಗಿದೆ. ಕೆರೆ, ಬಾವಿ, ಬಾಗಿಲುಗಳು, ದಿಡ್ಡಿಗಳು, ಬುರುಜುಗಳು, ದೊಡ್ಡ ಕಟ್ಟಡಗಳನ್ನು ನಿರ್ಮಿಸಿದನ್ನು ಕಾಣುತ್ತೇವೆ. ಈ ನೆಲವನ್ನಾಳಿದ ಅರಸು ಮನೆತನಗಳು ಅನ್ಯಧರ್ಮ ಸಹಿಷ್ಣುಗಳಾಗಿದ್ದು ಅನ್ಯಮತಿಯರನ್ನು ಉದಾರ ಭಾವದಿಂದಲೇ ನೋಡಿದ ಮಹಿಮರು. ಇಲ್ಲಿ ಎಲ್ಲಾ ಧರ್ಮಗಳು ಒಟ್ಟಿಗೆ ಅಸ್ತಿತ್ವದಲ್ಲಿದ್ದವು. ಈ ಎಲ್ಲಾ ಮುಖ್ಯ ಸೇವೆಗಳಲ್ಲೊಂದಾಗಿತ್ತು. ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ವಿಜಯನಗರ ಅರಸರು, ಕಾಕತೀಯ ಹಾಗೂ ಹೈಹೆಯ ಅರಸು ಮನೆತನಗಳು ಜೈನ, ಶೈವ, ಹಾಗೂ ವೈಷ್ಣವ ಧರ್ಮಗಳನ್ನು ಪೋಷಿಸಿಕೊಂಡು ಬಂದರು. ನಂತರ ಬಂದ ಬಹುಮನಿ ಸುಲ್ತಾನರಿಂದ ಇಸ್ಲಾಂಧರ್ಮ ರಾಯಚೂರು ಜಿಲ್ಲೆಯಲ್ಲಿ ಹರಡಿತು. ಬಹುಮನಿ ಸುಲ್ತಾನರ ಆಗಮನಕ್ಕಿಂತ ಪೂರ್ವದಲ್ಲಿ ಈ ನೆಲದಲ್ಲಿ ಜೈನ, ಶೈವ ಹಾಗೂ ವೈಷ್ಣವ ಧರ್ಮಗಳು ಅಸ್ತಿತ್ವದಲ್ಲಿದ್ದವು ಎನ್ನುವುದಕ್ಕೆ ಇಲ್ಲಿ ದೊರೆತಿರುವ ಅನೇಕ ಶಾಸನಗಳೇ ಸಾಕ್ಷಿ. ತರುವಾಯ ಕ್ರಿಶ್ಚಿಯನ್ ಧರ್ಮವೂ ಈ ನೆಲದಲ್ಲಿ ಪ್ರವೇಶ ಮಾಡಿತು.

ರಾಯಚೂರು ಜಿಲ್ಲಾ ಆರ್ಥಿಕ ವ್ಯವಸ್ಥೆಯ ಬಗ್ಗೆ ಸ್ಥೂಲ ಪರಿಚಯ ನೀಡುವಲ್ಲಿ ಇಲ್ಲಿ ದೊರೆತ ಶಾಸನಗಳು ಮುಂಚೂಣಿಯಲ್ಲಿವೆ. ದೊರೆತ ಮಾಹಿತಿಗಳ ಪ್ರಕಾರ ಅಂದಿನ ಜನರ ದುಡಿಮೆಯ ಪರಿಶ್ರಮ ಗಣನೀಯವಾಗಿತ್ತು. ತೆರಿಗೆ ನೀಡುವ ಪದ್ಧತಿ ಜಾರಿಯಲ್ಲಿತ್ತು. ಅವರವರ ದುಡಿಮೆಯ ಸಾಮರ್ಥ್ಯಕ್ಕೆ ಸಮನಾಗಿ ತೆರಿಗೆ ಕರ ವಿಧಿಸುತ್ತಿದ್ದರು. ರಾಯಚೂರು ಜಿಲ್ಲೆ ಭೌಗೋಳಿಕವಾಗಿ ಬಹಳ ಸಂಪದ್ಭರಿತ ಪ್ರದೇಶ. ಈ ಕಾರಣದಿಂದಲೇ ಅನೇಕ ಕದನಗಳಿಗೆ ರಣರಂಗವಾಗಿತ್ತು. ಜಿಲ್ಲೆಯ ಲಿಂಗಸೂಗೂರು ತಾಲೂಕಿನಲ್ಲಿ ಚಿನ್ನ ದೊರೆಯುತ್ತದೆ. ಮಾನ್ವಿ ಮತ್ತು ಸಿಂಧನೂರು ತಾಲೂಕುಗಳು ಭಾಗಶಃ ನೀರಾವರಿ ಪ್ರದೇಶವಾಗಿದ್ದು, ಭತ್ತದ ಕಣಜ ಎನಿಸಿವೆ. ದೇವದುರ್ಗ ತಾಲೂಕು ಭಾಗಶಃ ವ್ಯವಸಾಯ ಮಾಡುವ ರೈತನ ಮೊಗದಲ್ಲಿ ಬಲದಂಡೆ ಕಾಲುವೆಯಿಂದಾಗಿ ಮಂದಹಾಸ ನಲಿದಾಡುತ್ತಿದೆ. ಇಷ್ಟಿದ್ದರೂ ಸಹ ಬಡತನ ತಾಂಡವವಾಡುತ್ತಿದೆ.

ಬಿರುಬಿಸಿಲಿನ ಬರಪ್ರದೇಶವೆಂದೇ ಕರೆಸಿಕೊಳ್ಳುವ ಈ ಜಿಲ್ಲೆಯಲ್ಲಿ ಸಾಹಿತ್ಯ ಕೃಷಿಗೆ ಬಡತನವಿಲ್ಲ. ಅಖಂಡ ಕನ್ನಡ ಸಾಹಿತ್ಯದ ಅನುಭವ ತೀವ್ರತೆಯಿಂದ ಹುಟ್ಟಿದ್ದು ವಚನ ಸಾಹಿತ್ಯ. ಜಾತ್ಯಾತೀತ ಧೋರಣೆ, ವೈಚಾರಿಕತೆ ಈ ಸಾಹಿತ್ಯದ ಜೀವಾಳ. ವಚನಕಾರರು. ದಾಸರು ತತ್ವಪದಕಾರರು, ಈ ಜಿಲ್ಲೆಯಲ್ಲಿ ಆಗಿ ಹೋಗಿದ್ದಾರೆ. ಜೊತೆಗೆ ಹೊಸಗನ್ನಡದಲ್ಲಿ ಪೈರು ಹುಲುಸಾಗಿದೆ. ಮಸರಕಲ್ಲಿನ ಮುಕ್ತಾಯಕ್ಕ, ಶಂಕರ ದಾಸಿಮಯ್ಯ, ಉಳಿಮೇಶ್ವರಿ ಚಿಕ್ಕಯ್ಯ, ಗಬ್ಬೂರು ಬಿಬ್ಬಿಬಾಚರಸ, ಆಯ್ದಕ್ಕಿ

ಮಾರಯ್ಯ, ಆಯ್ದಕ್ಕಿ ಲಕ್ಕಮ್ಮ, ವಿಜಯದಾಸರು, ಜಗನ್ನಾಥ ದಾಸರು, ಗೋವಿಂದ ದಾಸರು ಕುಂಟೋಜಿ ದಾಸರು, ನೀರಲಕೆರೆ ಬಸವಲಿಂಗ ಶರಣರು. ಅರೋಲಿ ವತ್ಸಾದಿ, ಘನಮಠ ನಾಗಭೂಷಣ ಶಿವಯೋಗಿಗಳು, ಗೂಗಲ್ ಪರಪ್ಪಯ್ಯ, ಕಲ್ಮಲಾದ ತಾಯಣ್ಣ, ದಿನ್ನಿಯ ವೆಂಕಯ್ಯ ಕವಿ, ಜಹಿರಾಬಾದ್ ಹನುಮವ್ವ ಮುಂತಾದ ತತ್ವಪದಕಾರರ ಜೊತೆ ಆಧುನಿಕ ಸಾಹಿತ್ಯ ಸಂದರ್ಭದಲ್ಲಿ ಹಿರಿಯ ತಲೆಮಾರಿನ ಮಾನ್ವಿ ನರಸಿಂಗರಾಯ ಪಂ.ತಾರಾನಾಥ ಸೂಗೂರು ವೀರಶರ್ಮ, ಅಮರೇಶ ನುಗಡೋಣಿ ಚನ್ನಬಸವಪ್ಪ ಬೆಟ್ಟದೂರು. ಶಾಂತರಸ ಎರಡನೆ ತಲೆಮಾರಿನ ನಿಮಾಮಾ, ವಿ.ಎಸ್.ಕಾಂತನವರ್, ಮಂದಾಕಿನಿಬಾಯಿ, ಜಂಬಣ್ಣ ಅಮರಚಿಂತೆ, ರಾಜಶೇಖರ ನೀರಮಾನ್ವಿ, ಬಿ.ಟಿ.ಲಲಿತಾನಾಯಕ, ಶಾಶ್ವತಸ್ವಾಮಿ ಮುಕ್ಕುಂದಿಮಠ ಚನ್ನಣ್ಣ ವಾಲೀಕಾರ, ಗಿರಿರಾಜ ಹೊಸಮನಿ, ಬೋಳಬಂಡೆಪ್ಪ, ಎಸ್.ಎಸ್.ಮುಕ್ತಾಯಕ್ಕ ಮುಂತಾದ ಹಿರಿಯ ಮತ್ತು ಕಿರಿಯ ತಲೆಮಾರಿನ ನೂರಾರು ಬರಹಗಾರರು ಈ ಜಿಲ್ಲೆಯಲ್ಲಿ ಬೆಳೆದು ಬಂದಿದ್ದು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.

ರಾಯಚೂರು ಜಿಲ್ಲೆಯೂ ಸಂಗೀತ ಕ್ಷೇತ್ರದಲ್ಲಿ ಶ್ರೀಮಂತಿಕೆಯನ್ನು ಮೆರೆದಿದೆ. ವಿಶೇಷವಾಗಿ ಶಾಸ್ತ್ರೀಯ ಸಂಗೀತದಲ್ಲಿ ಈ ಜಿಲ್ಲೆ ಹೆಸರಾಗಿದೆ. ಪಂ.ಸಿದ್ಧರಾಂಜಂಬಲದಿನ್ನಿ, ಪಂ.ಮಾಣಿಕರಾವ್ ರಾಯಚೂರಕರ್ ನಂತರ ದತ್ತಪ್ಪ ಮಾಸ್ತರ, ರಾಮಸ್ವಾಮಿ ನೂಲಿ, ಅಂಬಯ್ಯ ನೂಲಿ, ಶೇಷಗಿರಿದಾಸ್ ಅಸ್ಕಿಹಾಳ ಮುಂತಾದ ಯುವ ಸಂಗೀತಗಾರರು ಈ ನೆಲದಲ್ಲಿ ಬೆಳೆದು ಬಂದಿದ್ದಾರೆ. ಜನವಾಣಿ ಬೇರು ಕವಿವಾಣಿ ಹುಂ ಎಂಬ ಹಿರಿಯರ ವಾಣಿಯಂತೆ ಶಿಷ್ಟಸಾಹಿತ್ಯವು ಜನಪದ ಸಾಹಿತ್ಯದಿಂದ ಅವಿರ್ಭವಿಸಿದೆ ಎಂದರೆ ಅತಿಶಯವಲ್ಲ. ಜಿಲ್ಲೆಯ ಜನರು ಅನೇಕ ನಂಬಿಕೆ ಆಚಾರ-ವಿಚಾರಗಳು, ರೂಢಿ-ಸಂಪ್ರದಾಯಗಳನ್ನು ಆಚರಿಸುತ್ತಾ ಬರುವ ಸಂದರ್ಭದಲ್ಲಿ ದೈವದ ಬಗ್ಗೆ ಭಯ, ಭಕ್ತಿ ಉಳ್ಳವರಾಗಿ ಪ್ರಕೃತಿಯ ವಿಕೋಪಗಳಿಗೆ ದೈವವೇ ಕಾರಣವೆಂದು ದೈವವನ್ನು ಶಾಂತಪಡಿಸುವ ಸಂದರ್ಭದಲ್ಲಿ ಅನೇಕ ಆಚರಣೆಗಳು ರೂಢಿಗೆ ಬಂದವು. ಇವುಗಳನ್ನೇ ನಾವು ಜನಪದ ಕಲೆಗಳೆಂದು ಕರೆಯುತ್ತೇವೆ. ಈ ಕಲೆಗಳು ಮಾನವನ ಸಾಂಸ್ಕೃತಿಕ ಬದುಕಿನ ವಿವರಣೆಯನ್ನು ನೀಡುತ್ತವೆ. ಇಂತಹ ಅನೇಕ ಕಲೆಗಳು ನಮ್ಮ ರಾಯಚೂರು ಜಿಲ್ಲೆಯಲ್ಲಿ ನೋಡಬಹುದು.

ರಾಯಚೂರು ಜಿಲ್ಲೆಯು ಕೋಟೆಗಳ ಮತ್ತು ಸ್ಮಾರಕಗಳ ಆಗರವಾಗಿದೆ. ಈ ಪ್ರದೇಶದ ಚರಿತ್ರೆಯನ್ನು ವಿವರಿಸುವಲ್ಲಿ ಅವು ಮುಖ್ಯ ಪಾತ್ರವಹಿಸುತ್ತಿದೆ. ಜೊತೆಗೆ ಶ್ರೀಸಾಮಾನ್ಯರ ಬದುಕಿನ ಭಾಗಗಳು ಬಿಚ್ಚಿಕೊಳ್ಳುವಲ್ಲಿ ಇವುಗಳ ಮಹತ್ವ ಕಡೆಗಣಿಸುವಂತಿಲ್ಲ. ಇಂತಹ ಕೋಟೆಗಳು ರಾಯಚೂರು ಜಿಲ್ಲೆಯಲ್ಲಿ ಕಾಣಸಿಗುತ್ತವೆ. ರಾಯಚೂರು, ಮುದುಗಲ್ಲು, ಜಲದುರ್ಗ, ಮಲಿಯಬಾದ್ ಮುಂತಾದ ಸ್ಥಳಗಳಲ್ಲಿ ಕೋಟೆಗಳನ್ನು ಕಾಣಬಹುದಾಗಿದೆ.

ಕಳೆದ ಅನೇಕ ವರ್ಷಗಳಿಂದ ಚರಿತ್ರೆಯನ್ನು ನೋಡುವ ದೃಷ್ಟಿ ಬದಲಾವಣೆಗಳನ್ನು ಪಡೆಯುತ್ತಾ ಬಂದಿದೆ. ಕನ್ನಡ ನಾಡಿನ ಕೆಲವು ಪ್ರಮುಖ ರಾಜಮನೆತನಗಳನ್ನು ಕುರಿತ ಇತಿಹಾಸ ಕ್ಷೇತ್ರದಲ್ಲೂ ವಿವಿಧ ವಿದ್ವಾಂಸರು ಒಲವನ್ನು ತೋರಿ ಕಾರ್ಯರೂಪಕ್ಕೆ ತಂದಿದ್ದಾರೆ. ಶಾಸನಗಳನ್ನೇ ಆಧಾರವಾಗಿಟ್ಟುಕೊಂಡು ವಿಭಿನ್ನ ದೃಷ್ಟಿಕೋನಗಳಿಂದಲೂ ಅಧ್ಯಯನ ಮಾಡಿದ್ದಾರೆ. ಇದರಿಂದಾಗಿ ಇತಿಹಾಸ ಜನಾನುರಾಗವನ್ನು ಪಡೆದು ಸಾಮಾನ್ಯ ಜನರಲ್ಲಿ ಅದರ ಬಗ್ಗೆ ಅರಿವು ಮೂಡತೊಡಗಿತು. ನಮಗೆ ಪರಿಚಯವೇ ಇಲ್ಲದಿದ್ದ ನಮ್ಮ ನಾಡಿನ ಪ್ರಾಚೀನ ಜೀವನ ಶೈಲಿಯ ಅಧ್ಯಯನಕ್ಕೆ ಅವಶ್ಯವೆನಿಸುವ ಶಾಸನ ಸಾಮಗ್ರಿಗಳ ಅಮೂಲ್ಯ ಭಂಡಾರವನ್ನು ತೆರೆದಂತಾಯಿತು. ಕನ್ನಡ ನಾಡಿನ ವಿವಿಧ ಅರಸು ಮನೆತನಗಳ ಸಾಮಂತರ ಆಳ್ವಿಕೆಯಲ್ಲಿ ಹುಟ್ಟಿದ ಶಾಸನಗಳು ನಾಡಿನ ಜನಾಂಗದ ಬದುಕಿನ ವಿಶ್ವಕೋಶಗಳೆನಿಸಿವೆ. ಶಾಸನಗಳಲ್ಲಿ ರಾಜಕೀಯ ಸಂಗತಿಗಳನ್ನು ಹೊರತುಪಡಿಸಿ ಸಾಂಸ್ಕೃತಿಕ ಹಾಗೂ ಸಾಮಾಜಿಕ ಅಂಶಗಳನ್ನು ಸಂಗ್ರಹಿಸಲಾಗಿದೆ. ಅಂದಿನ ಜನತೆ ಬದುಕಿದ ರೀತಿ, ವಿದ್ಯಾಭ್ಯಾಸ, ಕಲೆ, ಧಾರ್ಮಿಕ ಕಲಾಪ ಆಡಳಿತ, ಹೀಗೆ ಲೋಕೋಪಯೋಗಿ ಕಾರ್ಯಗಳ ವಿವರಗಳು, ಅವರ ಜೀವನ ಮೌಲ್ಯಗಳನ್ನು ಕುರಿತು ಅಧ್ಯಯನ ಶಾಸನಗಳನ್ನಾಧರಿಸಿ ನಡೆದಿದೆ. ಇಲ್ಲಿನ ಶಾಸನಗಳಿಂದ ವ್ಯಕ್ತವಾಗುವ ಸಂಗತಿಗಳನ್ನು ಅನ್ಯಶಿಸ್ತುಗಳಲ್ಲಿ ಆಕರಗಳ ಮೂಲಕ ಸಮರ್ಥಿಸಲು ಪ್ರಯತ್ನಿಸಲಾಗಿದೆ.

ಹೈದರಾಬಾದ್ ಕರ್ನಾಟಕ ಭಾಗದ ಶಾಸನಗಳ ಸಂಗ್ರಹ ಕಾರ್ಯದಲ್ಲಿ ಪ್ರಥಮವಾಗಿ ತೊಡಗಿಸಿ ಕೊಂಡವರು ಕರ್ನಲ್ ಮೆಕೆಂಜಿಯವರು. ನಂತರ ಮದ್ರಾಸ್ ಸಿವಿಲ್ ಸರ್ವಿಸ್ ನಲ್ಲಿ ಅಧಿಕಾರಿಯಾಗಿದ್ದ ಸರ್ ವಾಲ್ಟರ್ ಇಲಿಯಟ್ ನಿಂದ ಶಾಸನಗಳ ಸಮಗ್ರ ಅಧ್ಯಯನ ಪ್ರಾರಂಭವಾಯಿತು. ಈತನು ೧೮೩೭ ರಿಂದ ೧೮೭೦ರ ಅವಧಿಯಲ್ಲಿ ಮುಂಬಯಿ ಕರ್ನಾಟಕ, ನಿಜಾಂ ಕರ್ನಾಟಕ ಮತ್ತು ಹಳೆಯ ಮೈಸೂರು ಪ್ರಾಂತದ ಉತ್ತರ ಭಾಗಗಳಿಂದ ಸುಮಾರು ೧೩೦೦ ಶಾಸನಗಳನ್ನು ಸಂಗ್ರಹಿಸಿದನು. ಅಲ್ಲಿಂದ ಮುಂದೆ ಅವುಗಳಲ್ಲಿ ೫೯೫ ಶಾಸನಗಳನ್ನು ಆಯ್ದುಕೊಂಡು Karnataka desh Inscription ಎಂಬ ಸಂಪುಟವನ್ನು ಹೊರತಂದರು. ಈ ಸಂಪುಟದಲ್ಲಿ ಹೈದರಾಬಾದ್ ಕರ್ನಾಟಕದ ಹಲವು ಶಾಸನಗಳು ಸಂಗ್ರಹವಾಗಿವೆ. ವಾಲ್ಟರ್‌ನಿಂದ ಶಾಸನಗಳ ಸಂಗ್ರಹ ಮತ್ತು ಸಮಗ್ರ ಅಧ್ಯಯನ ಪ್ರಾರಂಭವಾಯಿತೆನ್ನಬಹುದು. ಆಂಧ್ರಪ್ರದೇಶ ಆರ್ಕಿಯಾಲಾಜಿಕಲ್ ವಿಭಾಗವು ಆಂಧ್ರಪ್ರದೇಶದ ಆರ್ಕಿಯಲಾಜಿಕಲ್ ಸಿರೀಸ್ ನಲ್ಲಿ ರಾಯಚೂರು ಜಿಲ್ಲೆಗೆ ಸಂಬಂಧಿಸಿದ ಕೆಲವು ಶಾಸನಗಳನ್ನು ಪ್ರಕಟಿಸಿದೆ.

ಹೈದರಾಬಾದ್ ಕರ್ನಾಟಕದ ಭಾಗದಲ್ಲಿ ಶಾಸನಾಧ್ಯಯನದ ಸಾಲಿನಲ್ಲಿ ಪ್ರಮುಖರಾದವರೆಂದರೆ ಪಿ.ಬಿ.ದೇಸಾಯಿಯವರು. ಇವರು jainism in south india and some Jainen epigraph's ಎಂಬ ಪುಸ್ತಕದಲ್ಲಿ ಹೈದರಾಬಾದ್ ಕರ್ನಾಟಕದ ೫೩ ಶಾಸನಗಳನ್ನು ಪ್ರಕಟಿಸಿದ್ದಾರೆ. ಅದೇ ರೀತಿ ಡಾ.ವಿ.ಶಿವಾನಂದ್, ಬಿ.ಆರ್.ಗೋಪಾಲ್, ಆರ್.ಎಂ.ಷಡಕ್ಷರಯ್ಯ, ವೈಜನಾಥ ಭಂಡೆ, ಮಿರಾಸಸೆ,

ಸೀತಾರಾಮ್ ಜಾಗೀರದಾರ್, ಹನುಮಾಕ್ಷಿ ಗೋಗಿ ಮತ್ತು ಚೆನ್ನ ಬಸವಯ್ಯ ಹಿರೇಮಠ, ಮತ್ತಿತರರು ಶಾಸನಗಳ ಬಗ್ಗೆ ಅಧ್ಯಯನ ಮಾಡಿದ್ದಾರೆ.

## ಅಧ್ಯಯನದ ಉದ್ದೇಶ

ಪ್ರಾಚೀನ ಕಾಲದಿಂದಲೂ ಕರುನಾಡು ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ವಿಶೇಷವಾದ ಕೊಡುಗೆ ನೀಡಿದೆ. ಅದೇ ರೀತಿಯಾಗಿ ರಾಯಚೂರು ಜಿಲ್ಲೆಯೂ ಸಹ ಪ್ರಾಗೈತಿಹಾಸಿಕ ಕಾಲದಿಂದ ಹಿಡಿದು, ಇಂದಿನ ಕಾಲದವರೆಗೂ ಅನೇಕ ಕೊಡುಗೆಗಳನ್ನು ನೀಡಿದೆ. ಇಲ್ಲಿಯ ಜನರ ಸಾಂಸ್ಕೃತಿಕ ಬದುಕು ವೈಶಿಷ್ಟ್ಯಪೂರ್ಣವಾಗಿದೆ. ಈ ಪ್ರದೇಶದಲ್ಲಿ ಅನೇಕ ಧರ್ಮಗಳು ನೆಲೆನಿಂತು ಆಳರಸರ ಆಶ್ರಯವನ್ನು ಪಡೆದುಕೊಂಡು, ಜನಮನದಲ್ಲಿ ಸ್ಥಿರಸ್ಥಾಯಿಯಾಗಿವೆ. ಪ್ರಸ್ತುತ ಶಾಸನಗಳ ಹಿನ್ನೆಲೆಯಲ್ಲಿ "ರಾಯಚೂರು ಜಿಲ್ಲಾ ಶಾಸನ ಸಾಹಿತ್ಯದಲ್ಲಿ ಮಹಿಳೆಯರು ಎಂಬುದಾಗಿ ಅಧ್ಯಯನ ನಡೆಸಲಾಗಿದೆ. ಇದುವರೆವಿಗೂ ಡಾ.ಸಿ.ಎಸ್.ಪಾಟೀಲರ Temples of Raicheer and Ballary Districts ಎಂಬ ಗ್ರಂಥದಲ್ಲಿ ಗಬ್ಬೂರಿನ ಕೆಲವು ಅಂಶಗಳನ್ನು ವಿವರಿಸಲಾಗಿದೆ. ಡಾ.ವಿ.ಶಿವಾನಂದರವರು ಹೈದ್ರಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು ಎಂಬ ತಮ್ಮ ಕೃತಿಯಲ್ಲಿ ಹಾಗೂ ಚೆನ್ನಬಸವಪ್ಪ ಹಿರೇಮಠರು ರಾಯಚೂರು ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಭಾರತಿಯವರ ರಾಯಚೂರು ಜಿಲ್ಲಾ ಶಾಸನಗಳ ಸಮಗ್ರ ಅಧ್ಯಯನ ಮತ್ತು ಮಹೇಶರವರ ದೇವದುರ್ಗ ತಾಲ್ಲೂಕಿನ ಶಾಸನಗಳು ಮತ್ತು ದೇವಾಲಯಗಳು ಎಂಬ ಅಧ್ಯಯನಗಳನ್ನು ನಡೆಸಿದ್ದಾರೆ. ಆದರೆ ರಾಯಚೂರು ಜಿಲ್ಲಾ ಶಾಸನ ಸಾಹಿತ್ಯದಲ್ಲಿ ಮಹಿಳೆಯರಿಗೆ ಸಂಬಂಧಿಸಿದ್ದಂತೆ ಇದುವರೆವಿಗೂ ಸಮಗ್ರವಾಗಿ ಯಾವುದೇ ರೀತಿಯಲ್ಲಿ ಕೆಲಸ ಕಾರ್ಯಗಳು ನಡೆದಿಲ್ಲ. ಆದ್ದರಿಂದ ನಾವು ಮಹಿಳೆಯರ ಬಗ್ಗೆ ವಿಸ್ತಾರವಾದ ಅಧ್ಯಯನ ಕೈಗೊಳ್ಳುವ ಉದ್ದೇಶದಿಂದ "ರಾಯಚೂರು ಜಿಲ್ಲಾ ಶಾಸನ ಸಾಹಿತ್ಯದಲ್ಲಿ ಮಹಿಳೆಯರು" ಎಂಬ ವಿಷಯವನ್ನಿಟ್ಟುಕೊಂಡು ಮೊದಲ ಬಾರಿಗೆ ವಿವರವಾದ ಅಧ್ಯಯನ ನಡೆಸಲಾಗಿದೆ.

ಈ ಹಿನ್ನೆಲೆಯಲ್ಲಿ ಪ್ರಕಟವಾಗಿರುವ ರಾಯಚೂರು ಜಿಲ್ಲೆಯ ಶಾಸನ ಸಾಹಿತ್ಯದಲ್ಲಿ ಮಹಿಳೆಯರು ಎಂಬ ಅಧ್ಯಯನದಿಂದ ಜಿಲ್ಲೆಯ ಇತಿಹಾಸ ಸಂಸ್ಕೃತಿಯನ್ನು ಚಿತ್ರಿಸುವ ಅವಕಾಶ ಉಂಟಾಗಿದೆ. ಈ ಮೂಲಕ ನಮ್ಮ ನಾಡನ್ನು ಕಾಲದಿಂದ ಕಾಲಕ್ಕೇ ಆಳಿದ ರಾಜರ ಆಡಳಿತ, ರಾಣಿಯರ ಆಡಳಿತ, ಅಂದಿನ ರಾಜಕೀಯ, ಸಾಮಾಜಿಕ, ಪರಿಸ್ಥಿತಿ ಅನುಸರಿಸಿದ ಧರ್ಮ, ಕಲೆ, ಸಾಹಿತ್ಯ ಜನಜೀವನದ ರೀತಿ ನೀತಿ ಆಚಾರ ವಿಚಾರಗಳನ್ನು ಅರಿಯಬಹುದಾಗಿದೆ.

ರಾಯಚೂರು ಜಿಲ್ಲೆಯ ಇತಿಹಾಸವನ್ನು ಅವಲೋಕಿಸಿದರೆ ಈ ಜಿಲ್ಲೆಯಲ್ಲಿ ಪ್ರಮುಖ ರಾಜಮನೆತನಗಳು ಸ್ಥಾಪನೆಗೊಂಡಿವೆ. ಈ ಜಿಲ್ಲೆಯನ್ನಾಳಿದ ರಾಜಮನೆತನದವರು ತಮ್ಮ ಆಡಳಿತದ

ಅವಧಿಯಲ್ಲಿ ಅನೇಕ ಶಾಸನಗಳನ್ನು ಹಾಕಿಸಿ ರಾಯಚೂರು ಜಿಲ್ಲೆಯ ವಿವಿಧ ತಾಲೂಕುಗಳಲ್ಲಿ ದೊರೆಯುವ ೪೦೦ಕ್ಕೂ ಮೇಲ್ಪಟ್ಟ ಶಾಸನಗಳು ದೊರೆತಿವೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಮಹಿಳೆಯರ ಬಗ್ಗೆ ಉಲ್ಲೇಖವಿರುವ ಶಾಸನಗಳು ೬೦. ಈ ಶಾಸನಗಳನ್ನೆಲ್ಲಾ ಒಂದು ಕಡೆ ಸೇರಿಸಿ ಅದರ ಮೂಲಕ ಆ ಪ್ರದೇಶದ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ ಇತ್ಯಾದಿ ಸಂಸ್ಕೃತಿಗೆ ಸಂಬಂಧಿಸಿದ ವಿಚಾರಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಿದೆ.

## ಉದ್ದೇಶಗಳು

೧. ರಾಯಚೂರು ಜಿಲ್ಲಾ ಶಾಸನ ಸಾಹಿತ್ಯದ ಚಾರಿತ್ರಿಕ ಹಿನ್ನೆಲೆ ತಿಳಿದುಕೊಳ್ಳುವುದು.

೨. ರಾಯಚೂರು ಜಿಲ್ಲಾ ಶಾಸನ ಸಾಹಿತ್ಯದಲ್ಲಿ ಮಹಿಳೆಯರ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯಗಳ ಪಾತ್ರ.

೩. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಹಲವು ಇತಿಹಾಸ ಮತ್ತು ಶಾಸನ ಸಾಹಿತ್ಯ ತಜ್ಞರು ನಡೆಸಿದ ಅಧ್ಯಯನದ ಸಂಕ್ಷಿಪ್ತ ವಿವರಣೆ.

೪. ಮಹಿಳೆ ಕ್ರಮವಾಗಿ ಕೌಟುಂಬಿಕ, ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ತನ್ನ ಜವಾಬ್ದಾರಿಯನ್ನು ಯಶಸ್ವೀಯಾಗಿ ನಿರ್ವಹಿಸಿದ್ದಾಳೆಯೇ? ಎಂಬುದನ್ನು ಈ ಅಧ್ಯಯನದಲ್ಲಿ ವಿವರಿಸಲಾಗಿದೆ.

೫. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಶಾಸನಗಳು ಸಾಹಿತ್ಯಿಕ ಕೃತಿಗಳನ್ನು ಮತ್ತು ಮೌಖಿಕ ಸಾಹಿತ್ಯವನ್ನು ಅನುಲಕ್ಷಿಸಿ ಅಧ್ಯಯನ ಮಾಡುವುದು.

## ಅಧ್ಯಯನದ ವ್ಯಾಪ್ತಿ

ಯಾವುದೇ ಒಂದು ಅಧ್ಯಯನದಲ್ಲಿ ಅದರ ವ್ಯಾಪ್ತಿಯನ್ನು ಸ್ಪಷ್ಟವಾಗಿ ನಿರ್ಧರಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ರಾಯಚೂರು ಜಿಲ್ಲೆಯ ಸಾಂಸ್ಕೃತಿಕ ಪರಂಪರೆ ಆರಂಭಗೊಂಡಿರುವುದು. ಕ್ರಿ.ಪೂ.೩೦೦೦ ವರ್ಷಗಳ ಹಿಂದಿನಿಂದ. ಆ ಕಾಲ ಸಂದರ್ಭದಲ್ಲಿ ರಾಯಚೂರು ಜಿಲ್ಲೆಯಲ್ಲಿ ಅನೇಕ ಪುರಾತತ್ವ ನೆಲೆಗಳನ್ನು ಗುರುತಿಸುವುದು ಗಮನಿಸಬಹುದಾಗಿದೆ. ನನ್ನ ಸಂಶೋಧನಾ ವಿಷಯದ ವ್ಯಾಪ್ತಿಯೂ ಕಾಲದ ದೃಷ್ಟಿಯಿಂದ ಮಸ್ಕಿಯಲ್ಲಿ ದೊರೆತ ಅಶೋಕನ ಶಾಸನದಿಂದ ಪ್ರಾರಂಭವಾಗಿ ೧೮ನೇ ಶತಮಾನದವರೆಗೆ ಲಭ್ಯವಾಗಿರುವ ಪೂರಕ ಶಾಸನ ಸಾಮಗ್ರಿಗಳ ಆಧಾರದಿಂದ ನಡೆದಿದೆ. ಪ್ರಸ್ತುತ ಅಧ್ಯಯನವು ಭೌಗೋಳಿಕವಾಗಿ ರಾಯಚೂರು ಜಿಲ್ಲೆಯ ವ್ಯಾಪ್ತಿಗೆ ಸೀಮಿತವಾಗಿದೆ.

ಈ ನಮ್ಮ ಅಧ್ಯಯನದಲ್ಲಿ ವಿಷಯಕ್ಕೆ ಸಂಬಂಧಿಸಿದಂತೆ ಕೆಲವೊಂದು ವಿಧಾನಗಳನ್ನು ಅನುಸರಿಸಲಾಗಿದೆ.

೧. ರಾಯಚೂರು ಭವ್ಯಪರಂಪರೆಗೆ ಆಧಾರ ಸ್ತಂಭಗಳಂತಿರುವ ಅನೇಕ ಶಾಸನ ದಾಖಲೆಗಳನ್ನು ಸಂಗ್ರಹಿಸಿ ಕೂಲಂಕಷವಾಗಿ ಅಧ್ಯಯನ ನಡೆಸಲಾಗಿದೆ.

೨. ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಶಾಸನಗಳನ್ನು ಸಾಹಿತ್ಯಿಕ ಕೃತಿಗಳನ್ನು ಮೌಖಿಕ ಸಾಹಿತ್ಯವನ್ನು ಅನುಲಕ್ಷಿಸಿ ಅಧ್ಯಯನ ಮಾಡಲಾಗಿದೆ.

೩. ಮೇಲಿನ ವಿಧಾನಗಳಿಂದ ದೊರೆತ ಕಡಿಮೆಯಾದಾಗ ಕ್ಷೇತ್ರಕಾರ್ಯ ಕೈಗೊಂಡು ಅವುಗಳ ಮೂಲಕ ಮಾಹಿತಿ ಸಂಗ್ರಹಿಸಿದೆ.

೪. ಸಂಗ್ರಹಿಸಿದ ಮಾಹಿತಿಯನ್ನು ತುಲನಾತ್ಮಕವಾಗಿ ವಿವೇಚನೆಗೊಳಪಡಿಸಿ ನಂತರ ಪ್ರಬಂಧ ರಚನೆಯಲ್ಲಿ ಬಳಸಲಾಗಿದೆ.

## ಆಕರ ಸಂಗ್ರಹಣೆಗಳು

ಸಂಶೋಧನೆಯಲ್ಲಿ ಮಾಹಿತಿ ಸಂಗ್ರಹಣೆ ಮತ್ತು ಆಕರ ಸಂಗ್ರಹಣೆಗಳು ಅತೀ ಪ್ರಮುಖವಾದ ವಿಧಾನಗಳಾಗಿವೆ. ಇದರಲ್ಲಿ ಒಂದು ಮೂಲ ಆಕರ ಸಂಗ್ರಹಣೆ, ಎರಡನೆಯದು ಅನುಷಂಗಿಕ ಆಕರ ಗಳಾಗಿವೆ. ಸಂಶೋಧನೆಯಲ್ಲಿ ಮೂಲ ಸಾಮಗ್ರಿಗೆ ಅತ್ಯಂತ ಪ್ರಮುಖ ಸ್ಥಾನವಿದೆ. ಏಕೆಂದರೆ ಇವು ಮೂಲ ವಿಷಯಕ್ಕೆ ಹೆಚ್ಚು ಹತ್ತಿರವಾಗಿರುತ್ತವೆ.

**ಮೂಲ ಸಾಮಗ್ರಿಗಳು :** ಕನ್ನಡ ವಿಶ್ವವಿದ್ಯಾಲಯ ಹಂಪಿ ಪ್ರಕಟಿಸಿರುವ ರಾಯಚೂರು ಜಿಲ್ಲಾ ಶಾಸನ ಸಂಪುಟ-೭ ಹಾಗೂ ಕರ್ನಾಟಕ ಪರ್ಷಿಯನ್ ಅರೆಬಿಕ್ ಮತ್ತು ಉರ್ದು ಶಾಸನಗಳು, ಮತ್ತು ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಚೆನ್ನಬಸವ ಹಿರೇಮಠರವರ ರಾಯಚೂರು - ಕೊಪ್ಪಳ ಜಿಲ್ಲೆಯ ಶಾಸನಗಳು ಅನುಬಂಧಗಳಲ್ಲಿಯ ರಾಯಚೂರು ಜಿಲ್ಲೆಗೆ ಸಂಬಂಧಪಟ್ಟ ಶಾಸನಗಳು ಹೀಗೆ ಮುಂತಾದವು ಮೂಲ ಆಕರಗಳಾಗಿವೆ.

**ಅನುಷಂಗಿಕ ಆಕರಗಳು :** ಮೂಲ ಆಕಾರಗಳಲ್ಲಿಯ ಅರೆಕೊರೆಗಳನ್ನು ಅನುಷಂಗಿಕ ಹಾಗೂ ಕ್ಷೇತ್ರಕಾರ್ಯದ ಮೂಲಕ ಮಾಹಿತಿಗಳನ್ನು ತುಂಬಿಕೊಳ್ಳಲಾಗಿದೆ. ಮೂಲ ಆಕರಗಳು ಒದಗಿಸುವ ಮಾಹಿತಿಯನ್ನು ಸಾಕ್ಷೀಕರಿಸಲು, ಅರ್ಥೈಸಲು ಕೆಲವೆಡೆ ಪ್ರಾಸಂಗಿಕವಾಗಿ ಅನುಷಂಗಿಕ ಆಕರಗಳನ್ನು ಸಾಹಿತ್ಯ ಕೃತಿಗಳನ್ನು ಬಳಸಿಕೊಳ್ಳಲಾಗಿದೆ. ಉದಾಹರಣೆಗೆ ಎಂ.ಚಿದಾನಂದಮೂರ್ತಿಯವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಚೆನ್ನಕ್ಕ ಎಲಿಗಾರರವರ ಶಾಸನಗಳಲ್ಲಿ ಸ್ತ್ರೀ ಸಮಾಜ ಮತ್ತು ಕರ್ನಾಟಕ ಶಾಸನೋಕ್ತ

ಮಹಿಳೆ, ಸಿ. ನಾಗಭೂಷಣರವರ ಕನ್ನಡ ಸಾಹಿತ್ಯ ಸಂಸ್ಕೃತಿ ಶೋಧನೆ ಹಾಗೂ ಸಾಹಿತ್ಯ ಸಂಸ್ಕೃತಿ ಹುಡುಕಾಟ, ಎಚ್ .ತಿಪ್ಪೇರುದ್ರಸ್ವಾಮಿಯವರ ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಹನುಮಾಕ್ಷಿ ಗೋಗಿಯವರ ಅನುಶಾಸನ, ಜೆ.ಎಂ.ನಾಗಯ್ಯನವರು ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ, ಡಿ.ವಿ.ಪರಮಶಿವಮೂರ್ತಿಯವರ ಕನ್ನಡ ಶಾಸನ ಶಿಲ್ಪ, ಮೃತ್ಯುಂಜಯ ಹೊರಕೇರಿಯವರ ರಾಯಚೂರು ಜಿಲ್ಲಾ ದರ್ಶನ ಹೀಗೆ ಮುಂತಾದ ಆಕರ ಸಾಮಗ್ರಿಗಳನ್ನು ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಿ ವಿಂಗಡಿಸಿಕಂಡು ಅಧ್ಯಯನಗಳಿಗನುಗುಣವಾಗಿ ಅಳವಡಿಸಿಕೊಂಡು ಈ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

೨

# ಅಧಿಕಾರಿ ವರ್ಗದವರು

ಪಾಣಿನಿ ಹೇಳುವ ಹಾಗೆ ಕರ್ನಾಟಕದ ರಾಣಿಯರು 'ಅಸೂರ್ಯಂ ಪಶ್ಯೆ'ಯಾಗಿರಲಿಲ್ಲ. ರಾಜ್ಯದ ಸಾಮಾಜಿಕ ಮತ್ತು ಧಾರ್ಮಿಕ ಜೀವನಗಳಲ್ಲಿ ಮಾತ್ರವಲ್ಲ, ರಾಜಕೀಯ ಜೀವನದಲ್ಲೂ ಪ್ರಧಾನಪಾತ್ರವನ್ನು ಅವರು ವಹಿಸಿದ್ದಂತೆ ತಿಳಿದುಬರುತ್ತದೆ. ರಾಜನು ತನ್ನ ರಾಣಿಯರನ್ನು ರಾಜ್ಯದ ಬೇರೆ ಬೇರೆ ಭಾಗಗಳನ್ನಾಳಲು ನೇಮಿಸುತ್ತಿದ್ದನು.

ರಾಯಚೂರು ಜಿಲ್ಲೆಯನ್ನು ಕುರಿತು ಪ್ರಕಟವಾಗಿರುವ ಶಾಸನಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಈ ಜಿಲ್ಲೆಯನ್ನು ಅನೇಕ ಪ್ರಭುವರ್ಗದವರು ಆಳಿದ್ದುದು ತಿಳಿದುಬರುತ್ತದೆ. ಅವರಲ್ಲಿ ಚಕ್ರವರ್ತಿಗಳು, ರಾಣಿಯರು, ಮಹಾಮಂಡಳೇಶ್ವರರು, ಮಹಾಸಾಮಂತರು, ಮಹಾಪ್ರಧಾನರು ಮತ್ತು ಇತರ ಕೆಳವರ್ಗದ ಅಧಿಕಾರಿಗಳು ಶಾಸನದಲ್ಲಿ ಉಲ್ಲೇಖಿತರಾಗಿದ್ದಾರೆ.[೧]

ವೇದ, ಪುರಾಣ, ಸ್ಮೃತಿಗಳ ಕಾಲದಿಂದಲೂ ಭಾರತೀಯ ಹಿಂದೂ ಸಮಾಜದಲ್ಲಿ ಸ್ತ್ರೀಯರ ಪಾಲಿಗೆ ಅಧಿಕಾರವೆಂಬುದು ಅಂಧಕಾರದ ಯುಗವಾಗಿತ್ತು. ಸ್ವಾತಂತ್ರ್ಯ, ಸಮಾನತೆ, ಧಾರ್ಮಿಕ ಸಂಸ್ಕಾರ ಹಾಗೂ ಶಿಕ್ಷಣದಲ್ಲಿ ಆಕೆಗೆ ಯಾವ ಹಕ್ಕು ಇರಲಿಲ್ಲ. ಶತಶತಮಾನಗಳಿಂದ ಅವಕಾಶಗಳು ಸ್ತ್ರೀಯರ ಪಾಲಿಗೆ ಗಗನಕುಸುಮವಾಗಿತ್ತು. "ಬದಲಾವಣೆ ಜಗದನಿಯಮ" ಎನ್ನುವಂತೆ ಕಾಲ ಬದಲಾದಂತೆ ಮಹಿಳೆಯರು ವಿವಿಧ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಪ್ರಮುಖ ಸ್ಥಾನ ಪಡೆದರು.[೨] ಕರ್ನಾಟಕದಲ್ಲಿ ಶಾಸನೋಕ್ತ ಮಹಿಳೆಯರ ಇತಿಹಾಸ ಕದಂಬರ ಕಾಲದಿಂದ ಪ್ರಾರಂಭವಾಗುತ್ತದೆ. ಅಂದಿನಿಂದ ಸಾಮಾನ್ಯವಾಗಿ ಶಾಸನಗಳ ಒಡಲಲ್ಲಿ ಮೂಡಿ ನಿಂತವರು ಪ್ರಭುವರ್ಗದ ಮತ್ತು ಉನ್ನತ ವರ್ಗದ ಮಹಿಳೆಯರು ಮಾತ್ರ. ಇವರಲ್ಲಿ ಚಕ್ರಾಧಿಪತಿಗಳ ರಾಣಿಯರಿಗಿಂತ, ಸಾಮಂತ, ಮಾಂಡಳಿಕ, ದಂಡನಾಯಕ, ನಾಳ್ಗಾವುಂಡ ಮತ್ತು ಗಾವುಂಡ ಮನೆತನದ ಮಹಿಳೆಯರು ಹೆಚ್ಚು ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಇದಕ್ಕೆ ಚಕ್ರವರ್ತಿಗಳು ಮಿಕ್ಕವರ ಸಂಖ್ಯೆ ಅಧಿಕವಾಗಿರುವುದು ಕಾರಣವಾಗಿರುವಂತೆ ಮೇಲಿನ ಅಂತಸ್ತಿನವರಿಗಿಂತ ಕೆಳಗಿನ ಅಂತಸ್ತಿನವರು, ಸಮಾಜದಲ್ಲಿ ಹೆಚ್ಚು ಕಾಣಿಸಿಕೊಳ್ಳಲು ಕಾರಣವಾಗಿರಬಹುದು.[೩]

ರಾಯಚೂರು ಜಿಲ್ಲೆಯಲ್ಲಿ ಕಲ್ಯಾಣ ಚಾಲುಕ್ಯ, ರಾಷ್ಟ್ರಕೂಟ ಹಾಗೂ ವಿಜಯನಗರ ಅರಸರ ಆಡಳಿತ ವ್ಯಾಪ್ತಿಯಲ್ಲಿ ರಾಣಿಯರಿಗೆ ವಿಶೇಷ ಗೌರವ ಮತ್ತು ಸ್ಥಾನಮಾನಗಳು ಕಲ್ಪಿಸಿಕೊಡಲಾಗಿದೆ. ರಾಣಿಯರು ಸಹ ರಾಜ್ಯದ ಸಾಮಾಜಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳಲ್ಲಿ ಆಸಕ್ತಿ ತೋರುವ ಜೊತೆಗೆ ಸಾಮ್ರಾಜ್ಯದ ವಿವಿಧ ವಿಭಾಗಗಳಲ್ಲಿ ಆಳ್ವಿಕೆ ನಡೆಸುತ್ತಿದ್ದರು. ರಾಣಿಯರಲ್ಲಿ ಪಿರಿಯರಸಿ, ಪಟ್ಟಮಹಾದೇವಿ ಮತತು ರಾಣಿ ಎಂಬ ಮೂರು ವಿಭಾಗಗಳಾದವು. "ಪ್ರಾಚೀನ ಕಾಲದಲ್ಲಿ ಬಹುಪತ್ನಿತ್ವ ಪದ್ಧತಿ ಜಾರಿಯಲ್ಲಿತ್ತು. ಪ್ರತಿಷ್ಠೆಯಿಂದ ಮೆರೆಯುವುದಕ್ಕಾಗಿ ಮೊದಲ ಹೆಂಡತಿಗೆ ಸಂತಾನವಿಲ್ಲದದ್ದಕ್ಕಾಗಿ ವೈರಿ ಅರಸರೊಡನೆ ಸೌಹಾರ್ದತೆ ಬೆಳೆಸುವುದಕ್ಕಾಗಿ ಮತ್ತು ಇತರ ಕಾರಣಗಳಿಂದಾಗಿ ಈ ಪದ್ಧತಿ ರೂಢಿಯಲ್ಲಿದ್ದಿತು. ಚಕ್ರವರ್ತಿ ಮತ್ತು ಮಾಂಡಳೀಕರ ಹೆಂಡಂದಿರನ್ನು 'ರಾಣಿ' ಅರಸಿ ಎಂದು ಕರೆಯುತ್ತಿದ್ದರು."[೪]

ರಾಜ್ಯದ ಆಡಳಿತದಲ್ಲಿ ಮುಖ್ಯವಾದ ಪಾತ್ರವನ್ನು ವಹಿಸಿದ ಅನೇಕ ರಾಣಿಯರನ್ನು ಶಾಸನಗಳು ಉಲ್ಲೇಖಿಸುತ್ತವೆ. ಅನೇಕ ವೇಳೆ ರಾಜನು ಅಧಿಕೃತವಾಗಿ ಪ್ರವಾಸ ಹೊರಟಾಗ ರಾಣಿಯೂ ಅವನ ಜೊತೆಯಲ್ಲಿ ಇರುತ್ತಿದ್ದಳು. ಶಿಕ್ಷಣ ಪ್ರಸಾರದಲ್ಲಿ ಮತ್ತು ದಾನ ಧರ್ಮಗಳನ್ನು ಪ್ರೋತ್ಸಾಹಿಸುವುದರಲ್ಲಿ ರಾಣಿಯರು ತುಂಬಾ ಆಸಕ್ತಿ ವಹಿಸಿದ್ದರು. ಇಲ್ಲಿ ದೊರೆತ ಶಾಸನಗಳು ಅನೇಕ ರಾಣಿಯರು ಅನೇಕ ಕಡೆ ಗ್ರಾಮವನ್ನು ಆಳುತ್ತಿದ್ದ ಬಗ್ಗೆ ಮಾಹಿತಿ ನೀಡುತ್ತವೆ. ಇತರೆ ರಾಜಮನೆತನದ ರಾಣಿಯರಿಗಿಂತ ಚಾಳುಕ್ಯ ಅರಸರ ರಾಣಿಯರು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ.

## ೨.೧. ರಾಣಿಯರು

| ಕ್ರ.ಸಂ. | ರಾಣಿಯರ ಹೆಸರು | ಅರಸ ಮತ್ತು ಕಾಲ ಕ್ರಿ.ಶ. | ಉಲ್ಲೇಖ |
|---|---|---|---|
| ೧ | ಮಹಾದೇವಿ | ೨ನೇ ಜಯಸಿಂಹ ೧೦೨೨ (ಕಲ್ಯಾಣ ಚಾಲುಕ್ಯ) | ಮಾ.೯೦ ಬಲ್ಲಟಗಿ |
| ೨ | ಸೋಮಲದೇವಿ | ಜಗದೇಕಮಲ್ಲ ೧೦೨೯ (ಕಲ್ಯಾಣ ಚಾಲುಕ್ಯ) | ಮಾ.೮೭ ಬಲ್ಲಟಗಿ |
| ೩ | ಸೋಮಲದೇವಿ | ೨ನೇ ಜಯಸಿಂಹ ೧೦೩೧ (ಕಲ್ಯಾಣ ಚಾಲುಕ್ಯ) | ಮಾ.೯೧ ಬಲ್ಲಟಗಿ |
| ೦೪ | ಚಾಮಲದೇವಿ | ತ್ರೈಲೋಕ್ಯಮಲ್ಲ ೧೦೫೮ (ಕಲ್ಯಾಣ ಚಾಲುಕ್ಯ) | ಮಾ.೯೫ ಬಲ್ಲಟಗಿ |
| ೦೫ | ಉಲ್ಲೇಖವಿಲ್ಲ | ಸೋಮೇಶ್ವರ ೧೧ನೇ ಶತಮಾನ (ಕಲ್ಯಾಣ ಚಾಲುಕ್ಯ) | ಮಾ.೮೮ ಬಲ್ಲಟಗಿ |

| | | | |
|---|---|---|---|
| ೦೬ | ಬಿಜ್ಜಲದೇವಿ | ಜಗದೇಕಮಲ್ಲ ೧೦೩೩ | ಮಾ.೧೬ ತಡಕಲ್ಲ |
| | | (ಕಲ್ಯಾಣ ಚಾಲುಕ್ಯ) | |
| ೦೭ | ಅಬ್ಬಲದೇವಿ | ತ್ರಿಭುವನಮಲ್ಲ ೧೧೨೪ | ಲಿಂಗಸೂಗೂರು |
| | | (ಕಲ್ಯಾಣ ಚಾಲುಕ್ಯ) | ಲಿಂಗಸಗೂರು ೧ |
| ೦೮ | ತ್ರೈಳೋಕ್ಯಮಹಾದೇವಿ | ತ್ರೈಲೋಕ್ಯಮಲ್ಲ ೧೦೭೬ | ಸಿಂಧನೂರು ೨೦ |
| | | (ಕಲ್ಯಾಣ ಚಾಲುಕ್ಯ) | ಮುಕ್ಕುಂದಿ |
| ೦೯ | ತಿರುಮಲದೇವಿ | ಕೃಷ್ಣದೇವರಾಯ ೧೫೨೧ | ಮುಕ್ಕುಂದಿ ೧೯ |
| | | (ಕಲ್ಯಾಣ ಚಾಲುಕ್ಯ) | ಚಿಕ್ಕಲಪರವಿ |
| ೧೦ | ಚಿಂನಾದೇವಿ | ಕೃಷ್ಣದೇವರಾಯ ೧೫೨೧ | ಮುಕ್ಕುಂದಿ ೧೯ |
| | | (ಕಲ್ಯಾಣ ಚಾಲುಕ್ಯ) | ಚಿಕ್ಕಲಪರವಿ |
| ೧೧ | ಪಂಪಾದೇವಿ | ಭುವನೈಕ್ಯಮಲ್ಲ ೧೦೬೯ | ಮಾನ್ವಿ ೫೫ |
| | | (ಕಲ್ಯಾಣ ಚಾಲುಕ್ಯ) | ಕೆರೆಯೂರು |
| ೧೨ | ಪಟ್ಟಮಹಾದೇವಿ | ಮಹಾಮಂಡಳೇಶ್ವರ | ಮಾನ್ವಿ |
| | | ಮಲ್ಲನೆಯ ಅರಸ | ಮಲ್ಲಟ |
| ೧೩ | ಮಾಲಕದೇವಿ | ಮಹಾಮಂಡಳೇಶ್ವರ | ಮಾನ್ವಿ |
| | | ಮಲ್ಲನೆಯ ಅರಸ | ಮಲ್ಲಟ |
| ೧೪ | ಬೆಸವಲದೇವಿ | ಮಹಾಮಂಡಳೇಶ್ವರ | ಮಾನ್ವಿ |
| | | ಮಲ್ಲನೆಯ ಅರಸ | ಮಲ್ಲಟ |
| ೧೫ | ಮಲಯಮತಿ | ವಿಕ್ರಮಾದಿತ್ಯ ೧೦೯೬ | ಮಾನ್ವಿ ೧೦೪ |
| | | (ಕಲ್ಯಾಣ ಚಾಲುಕ್ಯ) | ಬಾಗಲವಾಡ |

ಕ್ರಿ.ಶ.೧೧೨೪ರ ಶಾಸನವು ತ್ರಿಭುವನಮಲ್ಲನು ಕಲ್ಯಾಣದ ನೆಲೆವೀಡಿನಲ್ಲಿದ್ದಾಗ. ಅವನ ರಾಣಿ ಅಬ್ಬಲದೇವಿ ಕರಡಿಕಲ್ಲೂನೂರರ ಭತ್ತಗ್ರಾಮ ಲಿಂಗವನ್ನು ಆಳುತ್ತಿದ್ದಂತೆ ಹೇಳಿದೆ. ಆಗ ಅಲ್ಲಿನ ಕಲಿದೇವೇಶ್ವರ ದೇವರಿಗೆ ದಾನ ನೀಡಿದ್ದಂತೆ ಉಲ್ಲೇಖವಾಗಿದೆ.[೫](ಲಿಂ-೧) ಬಲ್ಲಟಗಿ ಗ್ರಾಮದ ತ್ರುಟಿತ ಶಾಸನವು ಕ್ರಿ.ಶ.೧೦೨೭ ಸೋಮಲದೇವಿಯು ಪತಗಿರಿಯ ನೆಲೆವೀಡಿನಲ್ಲಿದ್ದಾಗ, ಎಡದೊರೆ ೨೦೦೦ದಲ್ಲಿದ್ದ ಭತ್ತಗ್ರಾಮ ಬಳ್ಳನಿಟ್ಟಿಗೆಯಲ್ಲಿ ಪೆರ್ಗಡೆ ಕಕ್ಕಪಯ್ಯ ವಿಷ್ಣುದೇವಾಲಯವನ್ನು ಮಾಡಿಸಿದ(ಮಾ.೮೧) ಈಕೆ ಪುಲಿಪೊದರ ಪಾಲವುವಪ್ಪಯಣ ಬೀಡಿನಲ್ಲಿದ್ದು ರಾಜಧಾನಿ ಪಿರಿಯ ಮೊಸಂಗಿಯೂ ಕಟ್ಟಲಾದ ಬಸದಿಗೆ ಭೂದಾನ ನೀಡಿದ್ದಾಳೆ.[೬] (ಲಿಂಗ-೪೫) ಕ್ರಿ.ಶ.೧೦೨೯ ರಲ್ಲಿ ಪನ್ನಿರ್ಕ್ಯಯಪ್ಪಯಣ ಬೀಡಿನಲ್ಲಿದ್ದಾಗ ಭತ್ತ ಗ್ರಾಮ ಬಳ್ಳನಿಟ್ಟಿಗೆಯಲ್ಲಿನ ಬಸದಿಗೆ ಭೂದಾನ ನೀಡಿದ್ದಾಳೆ. ಜೊತೆಗೆ ಮನೆಯು ನಿವೇಷಣಗಳು ಮತ್ತು

ಗಾಣವನ್ನು ನೀಡಿದ್ದಾಳೆ.(ಮಾ.೮೮) ಕ್ರಿ.ಶ.೧೦೩೧ರಲ್ಲಿ ಏತಗಿರಿಯ ನೆಲೆವೀಡಿನಲ್ಲಿದ್ದಾಗ ದಿದ್ದಿಗೆಯ ಮಧುಸೂದನಭಟ್ಟ ಎಂಬುವವನಿಗೆ ಬಳ್ಳ ನಿಟ್ಟಿಗೆಯಲ್ಲಿ ಭೂದಾನ ನೀಡಿದ್ದಾಳೆ.[೯] (ಮಾ.೮೮) ಕ್ರಿ.ಶ.೧೦೩೫ ಈಕೆ ಪೊಟ್ಟಳಕೆರೆಯ ನೆಲೆವೀಡಿನಲ್ಲಿದ್ದಳು. ಆಗ ಉತ್ತರಾಯಣ ಸಂಕ್ರಾಂತಿ ನಿಮಿತ್ತ ಬಳ್ಳನಿಟ್ಟಿಗೆಯ ಬಂಕೇಶ್ವರ ದೇವರಿಗೆ ಭೂದಾನ ನೀಡಿದ್ದಾಳೆ. ದಾನವನ್ನು ದೇವರ ಪರವಾಗಿ ಕರ್ನಾರಾಸಿ ಸ್ವೀಕರಿಸಿದ ಎಂದು ಉಲ್ಲೇಖವಿದೆ(ಮಾ.೧೦೦).

ಜಗದೇಕಮಲ್ಲನ ಪತ್ನಿಯರಲ್ಲಿ ಬಿಜ್ಜಲದೇವಿಯು ಒಬ್ಬಳು. ಕ್ರಿ.ಶ.೧೦೩೧ರ ಶಾಸನವು ಈಕೆಯನ್ನು ಉಲ್ಲೇಖಿಸಿದ್ದು, ಈಕೆಯು ಪೊಟ್ಟಳಕೆರೆಯ ನೆಲೆವೀಡಿನಲ್ಲಿದಂತೆ ಶಾಸನವು ತಿಳಿಸುತ್ತದೆ.[೧೦] (ಮಾ.೪೦) ಕ್ರಿ.ಶ.೧೦೩೩ರಲ್ಲಿ ಶಾಸನವೊಂದು ಈಕೆಯನ್ನು ಹೆಸರಿಸಿದ್ದು ಸೂರ್ಯಗ್ರಹಣ ಕಾಲದಲ್ಲಿ ಅಗ್ರಹಾರ ತಡಕಲ್ಲಿನಲ್ಲಿ ಭೂದಾನ ನೀಡಿದ ಉಲ್ಲೇಖವಿದೆ.(ಮಾ.೧೦೦) ಕ್ರಿ.ಶ.೧೫೨೧ರ ಕೃಷ್ಣದೇವರಾಯನ ಶಾಸನವು ರಾಯಚೂರು, ಅಲಂಪೂರು, ಮಾನವೆ ಚಿಕಲಪರ್ವಿ, ಹಾನಗಲ್ಲು ಮತ್ತು ಮೊಗಡೆ ದುರ್ಗಗಳನ್ನು ಗೆದ್ದು ಕೊಡಲೂರು ಸಂಗಮಕ್ಕೆ ಬಂದ. ಆ ಸಂಗಮವು ಕೃಷ್ಣವೇಣಿ ಮತ್ತು ಭೀಮರಥಿಯ ಸಂಗಮವಾಗಿತ್ತು. ಅಲ್ಲಿನ ಸಂಗಮದಲ್ಲಿ ರತ್ನಧೇನು ಮಹಾಧಾನವನ್ನು ಮಾಡಲು ಬಯಸಿ ತನ್ನ ಪತ್ನಿಯರಾದ ಚಿಂನಾದೇವಿಯ ಕೈಯಲ್ಲಿ ಗೋದಾನವನ್ನು ಮತ್ತು ತಿರುಮಲದೇವಿ ಕೈಯಲ್ಲಿ ಕನಕದಾನವನ್ನು ಮಾಡಿಸಿ ಮಾನವೆ ಸೀಮೆಯ ಚಿಕಲಪರವಿಯನ್ನು ತಿರುವೆಂಗಳನಾಥ ದೇವರಿಗೆ ದಾನ ನೀಡುತ್ತಾನೆ.[೧೧] (ಮಾ.೧೯) ಕುರುಡಿ ಗ್ರಾಮದ ಕ್ರಿ.ಶ.೧೧೨೨ರ ಶಾಸನವು ಚಾಳುಕ್ಯ ದೊರೆ ಭೂಲೋಕಮಲ್ಲನ ಆಳ್ವಿಕೆಯ ಕಾಲವಾಗಿದ್ದು, ಮಹಾಪ್ರಧಾನ ನಿಂಬಣಯ್ಯನ ಮಗಳು ದಾನ ಕೊಟ್ಟ ವಿವರ ತಿಳಿಸುತ್ತದೆ. ಇಬ್ಬರು ಹೆಣ್ಣು ಮಕ್ಕಳಾದ ನಾಗಲದೇವಿ ಹಗೂ ಗಂಗಣ್ಣೆಬ್ಬೆಯರನ್ನು ಶಂಕರಾರ್ಯನಿಗೆ ಹಾಗೂ ಅವರ ತಮ್ಮ ಮಹಾದೇವನಿಗೆ ಮಧುವೆ ಮಾಡಿಕೊಡಲಾಗಿತ್ತು. ನಾಗಲದೇವಿಯು ತನಗೆ ಬಳುವಳಿಯಾಗಿ ಕೊಟ್ಟ ತೈಲಪ ದೇವರ ಅಗ್ರಹಾರ ರಾಣಿವಿಯಲ್ಲಿ ಬಂದ ವೃತ್ತಿಯಲ್ಲಿ ಅರ್ಧ ವೃತ್ತಿಯನ್ನು ರೂಢಿಯ ಶಂಕರೇಶ್ವರ ಹಾಗೂ ನಾಗೇಶ್ವರದೇವರಿಗೆ ದಾನ ಮಾಡಿದಳು ಎಂಬ ಉಲ್ಲೇಖವಿದೆ.[೧೨] (ಮಾ.೪೪)

ಕಪಗಲ್ ಕ್ರಿ.ಶ.೧೦೬೯ ಶಾಸನವು ಕಲ್ಯಾಣ ಚಾಲುಕ್ಯ ಚಕ್ರವರ್ತಿ ಭುವನೈಕಮಲ್ಲನು ಕೆರೆಯೂರ ನೆಲೆವಿಡಿನಿಂದ ರಾಜ್ಯಭಾರ ಮಾಡುತ್ತಿದ್ದ. ಇವನ ಹೆಂಡತಿ ಪಂಪಾದೇವಿಯನ್ನು ದ್ವಿತೀಯ ಲಕ್ಷ್ಮೀ ಸಮಾನೆ ಗೋತ್ರನಿಧಾನೆ ಪರಿವಾರ ಚಿಂತಾಮಣಿ, ಮಲೆಪಡವಂಗಿ ಮುಂತಾಗಿ ಶಾಸನ ಕರೆದಿದೆ. ಈ ಭೋಗೇಶ್ವರ ದೇವರಿಗೆ ದಾನ ಕೊಟ್ಟ ವಿಚಾರವನ್ನು ತಿಳಿಸುತ್ತದೆ.[೧೩] (ಮಾ.೫೫) ಹರವಿ ಗ್ರಾಮದ ಕ್ರಿ.ಶ.೧೦೨೮ರ ಶಾಸನವು ಚಾಳುಕ್ಯ ಭುವನೈಕಮಲ್ಲನ ಪತ್ನಿ ಸ್ವಯಂಭೂ ಮೂಲಸ್ಥಾನ ದೇವಾಲಯಕ್ಕೆ ಅದರ ಜೀರ್ಣೋದ್ಧಾರಕ್ಕೆ ತಪೋಧನರ ಆಹಾರ ದಾನ, ವಿದ್ಯ ಮೂಂತಾದವುದಕ್ಕೆ ೪೨ ಗೇಣ

ಅಳತೆಯಲ್ಲಿ ಅಳೆದು ೫೦ ಮತ್ತರು ಕರಿಯ ನೆಲವನ್ನು ಬಿಡುತ್ತಾಳೆ. ಬಲ್ಲಟಗಿ ಗ್ರಾಮದ ತ್ರುಟಿತ ಶಾಸನವು ಕ್ರಿ.ಶ.೧೦೨೮ರ ಕಾಲವಾಗಿದ್ದು, ಚಾಳುಕ್ಯ ಜಗದೇಕಮಲ್ಲನ ರಾಣಿ ಸೋಮಲದೇವಿಯು ಹೆಗ್ಗಡೆ ಕಕ್ಕಪಯನು ಎಡೆದೊರೆ ೨೦೦೦ರ ಬಳ್ಳನಿಟ್ಟಿಗೆಯಲ್ಲಿ ವಿಷ್ಣುದೇವಾಲಯ ಕಟ್ಟಿಸಿದಾಗ ಭೂಮಿಯನ್ನು ದಾನ ಮಾಡಿದ ಉಲ್ಲೇಖವಿದೆ.[೧೪] (ಮಾ.೮೧) ಅದೇ ಗ್ರಾಮದ ಇನ್ನೊಂದು ಶಾಸನವು (ಕ್ರಿ.ಶ.೧೦೨೯) ಜಗದೇಕಮಲ್ಲ ಆಳುತ್ತಿರುವಾಗ ಅವನ ರಾಣಿ ಸೋಮಲದೇವಿ ಎಂಬುವವಳು ಪಂದಿರ್ಕೆಯ ನೆಲೆ ವೀಡಿನಲ್ಲಿದ್ದಾಗ ಎಡದೊರೆ-೨೦೦೦ ನಾಡಿನ ಭತ್ತಗ್ರಾಮವಾದ ಬಳ್ಳನಿಟ್ಟಿಗೆಯ ಬಸದಿಗೆ ಅಲ್ಲಿಯ ಕಂಮತದೊಳಗೆ ಪಿರಿಯ ಕೊಲಲ್ಲಿ ೨೪ ಮತ್ತರು ತೋಟ, ಐದು ಮನೆ, ಒಂದು ಗಾಣವನ್ನು ದಾನವಾಗಿ ಕೊಟ್ಟದ್ದನ್ನು ತಿಳಿಸುತ್ತದೆ.[೧೫] ಅದೇ ಗ್ರಾಮದ ಶಾಸನ ಕ್ರಿ.ಶ.೧೦೨೨ ಚಾಳುಕ್ಯ ಎರಡನೇ ಚಕ್ರವರ್ತಿ ಆಳ್ವಿಕೆಯ ಕಾಲವಾಗಿದ್ದು, ಚಕ್ರವರ್ತಿಯ ರಾಣಿ ಮಹಾದೇವಿಯ ಪುವ್ವರವಳ್ಳಿಯ ಬೀಡಿನಲ್ಲಿದ್ದಾಗ ತಂತ್ರಪಾಳ ಮಲ್ಲಯ್ಯನು ಬಳ್ಳನಿಟ್ಟಿಗೆಯಲ್ಲಿ ಪ್ರತಿಷ್ಠಾಪಿಸಿದ ತ್ರೈಪುರುಷ ದೇವಾಲಯಕ್ಕೆ ಅಯ್ಯಣವಾಡಿ ೫೦೦ರ ಮನ್ನೆಯ ಲೋಕಾದಿತ್ಯನಿಂದ ಭೂಮಿಯನ್ನು ಪಡೆದು ದಾನ ಬಿಡುತ್ತಾಳೆ.[೧೬] (ಮಾ.೯೦) ಕ್ರಿ.ಶ.೧೦೩೧ರ ಶಾಸನವು ಚಾಳುಕ್ಯ ಜಯಸಿಂಹನ ಚಕ್ರವರ್ತಿಯ ರಾಣಿ ಸೋಮಲದೇವಿಯು ಏತಗಿರಿಯ(ಯಾದಗಿರಿ) ನೆಲೆವೀಡಿನಲ್ಲಿದ್ದಾಗ ದಿದ್ದಿಗೆಯ ಮಧುಸೂಧನಭಟ್ಟರಿಗೆ ಭತ್ತಗ್ರಾಮ ಬಳ್ಳನಿಟ್ಟಿಗೆ ಯಲ್ಲಿ ಪಿರಿಯ ಕೊಲಲ್ಲಿ ನೂರು ಮತ್ತರು ಭೂಮಿಯನ್ನು ದಾನ ನೀಡುತ್ತಾಳೆ. ಇದರೊಂದಿಗೆ ಕೈ ಅಳತೆ ಮನೆಯ ನಿವೇಶನವನ್ನು ನೀಡುತ್ತಾಳೆ.[೧೭](ಮಾ.೯೧) ಅದೇ ಗ್ರಾಮದ ಕ್ರಿ.ಶ.೧೧೧೫ರ ಶಾಸನವು ಚಾಳುಕ್ಯ ದೊರೆ ವಿಕ್ರಮಾದಿತ್ಯನ ಆಳ್ವಿಕೆಯ ಕಾಲಕ್ಕೆ ಸೇರಿದ್ದು ಚಕ್ರವರ್ತಿಯ ರಾಣಿ ಚಂದಲದೇವಿ ಕಲದೇವರ ಅಂಗಭೋಗ ಖಣ ಸ್ಫುಟಿತ ಮೊದಲಾದ ಕಾರ್ಯಗಳಿಗೆ ೧೨ ಮತ್ತರು ಭೂಮಿ, ಹೂವ್ವಿನ ತೋಟ, ಗಾಣವನ್ನು ದಾನ ಮಾಡಿದ್ದಾಳೆ.[೧೮] (ಮಾ.೯೬) ಮಲ್ಲಟ ಗ್ರಾಮದ ಶಾಸನವು ಐತಿಹಾಸಿಕ ಮಹತ್ವ ಪಡೆದ ಶಾಸನವಾಗಿದ್ದು, ಈ ಶಾಸನದ ಕಾಲವು ಕ್ರಿ.ಶ.೧೧೯೬ ಆಗಿದ್ದು, ಕಲ್ಯಾಣ ಚಾಳುಕ್ಯ ಮಹಾಮಂಡಳೇಶ್ವರ ಮಾರಟದ ಮಲ್ಲನೆಂಬವನಿದ್ದ, ಇವನ ಪಿರಿಯರಸಿ ಪಟ್ಟಮಹಾದೇವಿ, ಮಾಲಕದೇವಿ, ಬೆಸವಲದೇವಿಯರು ಮತ್ತಿತರರು ಸಕಳೇಶ್ವರ ದೇವರ ಮಾದೇಶ್ವರ ದೇವರ ಅಂಗಭೋಗ, ರಂಗಭೋಗ, ಪಾತ್ರಪಾವುಳ ಖಂಡ ಸ್ಫುಟಿತ, ಜೀರ್ಣೋದ್ಧಾರ ಮುಂತಾದ ಕಾರ್ಯಕ್ರಮಗಳಿಗೆ ದಾನಕೊಟ್ಟ ವಿಚಾರ ಬರುತ್ತದೆ.

ಬಾಗಲವಾಡದ ಕ್ರಿ.ಶ.೧೧೯೬ರ ಶಾಸನವು ಚಾಳುಕ್ಯ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ್ದಾಗಿದ್ದು, ತ್ರಿಭುವನಮಲ್ಲನ ರಾಣಿ ಮಲಯಮತಿಯ ಉಲ್ಲೇಖವಿದ್ದು, ಬಮ್ಮಳಹಾಳ ಗ್ರಾಮದ ಪ್ರಭು, ಗಾವುಂಡರಿಗೆ, ತೆರಿಗೆಗಳನ್ನು ನೀಡಿ ೧೫ ಮತ್ತರು ಭೂಮಿ ನೀಡಿದ್ದನ್ನು ತಿಳಿಸುತ್ತದೆ.[೧೯] (ಮಾ.೧೦೪)

ಅದೇ ಗ್ರಾಮದ ಕ್ರಿ.ಶ.೧೦೫೩ರ ತ್ರೈಲೋಕ್ಯಮಲ್ಲನ ಆಳ್ವಿಕೆಯಲ್ಲಿ ಅವನ ರಾಣಿ ಧರ್ಮದ ವಿತಕ್ಕೆ, ದಾನ ನೀಡಿದಂತೆ ಹೇಳಿದೆ. ಶಾಸನ ಕ್ರಿ.ಶ.೧೦೬೬ರ ಕಲ್ಯಾಣ ಚಾಳುಕ್ಯ ತ್ರೈಲೋಕ್ಯ ಮಲ್ಲನ ಪತ್ನಿ ತ್ರೈಲೋಕ್ಯ ಮಹಾದೇವಿ ಮುಕ್ಕುಂದೆಯನ್ನು ತ್ರಿಭೋಗಾಭ್ಯಂತರದಿಂದ ಆಳುತ್ತಿದ್ದಳು. ತುಂಗಭದ್ರಾ ತೀರದ ಕಪಾಳೇಶ್ವರ ದೇವರಿಗೆ ಭೂದಾನ ನೀಡಿದ ಉಲ್ಲೇಖವಿದೆ.[೨೦] (ಸಿಂ.೨೦)

ರಾಯಚೂರು ಜಿಲ್ಲೆಯಲ್ಲಿ ಅನೇಕ ನಾಡಗೌಡಕಿ ರಾಜಮನೆತನಗಳು ತಮ್ಮ ಪರಾಕ್ರಮ ಪೌರುಷಗಳಿಗೆ ಹಾಗೂ ಸಂಸ್ಕೃತಿಯ ಸಂವರ್ಧನೆಗೆ ಪ್ರಸಿದ್ಧವಾಗಿದೆ. ಅವುಗಳಲ್ಲಿ ವೀರಶೈವ ನಾಡಗೌಡಕಿ ಮನೆತನಗಳು ತಮ್ಮ ಆಡಳಿತ ಮತ್ತು ಅಧಿಕಾರದೊಂದಿಗೆ ವೀರಶೈವಧರ್ಮ, ಸಾಹಿತ್ಯ, ಸಂಸ್ಕೃತಿ ಮತ್ತು ಶಿಕ್ಷಣದ ಅಭಿವೃದ್ಧಿಗಾಗಿ ಅನುಪಮ ಕೊಡುಗೆಯನ್ನು ನೀಡಿವೆ. ಈ ಜಿಲ್ಲೆಯಲ್ಲಿ ಸಣ್ಣಪುಟ್ಟ ಸುಮಾರು ಇಪ್ಪತತು ನಾಡಗೌಡ ಮನೆತನಗಳು ಆಳಿ ಹೋಗಿವೆ. ಅವುಗಳಲ್ಲಿ ಪ್ರಮುಖವಾಗಿ ೧. ಜವಳಗೆರೆ ೨. ಜಾಲವಾಡಿಗಿ, ಉದ್ಬಾಳ, ೩. ಉಮಲೂಟಿ (ಸಿಂದ-ತಾ), ೪. ಗೆಜ್ಜಲಗಟ್ಟ, ೫. ಮೆಡಿಕೆನಾಳು, ೬. ಮುದುಗಲ್ (ಲಿಂಗ.ತಾ) ೭. ಗಣೆಕಲ್ (ದೇವ-ತಾ) ಇವು ಹಿರಿಯ ಸಂಸ್ಥಾನಗಳು ಹಾಗೂ ೧. ಬಳಗನೂರು, ೨. ಪೋತನಾಳ, ೩. ಜೀನೂರು, ೪. ಪಾಮನಕಲೂರು ೫. ಗಣಜಗಿ ಮತ್ತು ೬. ಮಾದಕಲ್‌ಗಳು ಚಿಕ್ಕ ಸಂಸ್ಥಾನಗಳು. ಹಿರಿಯ ಸಂಸ್ಥಾನಗಳಿಗೆ ೧೫ ರಿಂದ ೩೦ರವರೆಗೆ ಹಳ್ಳಿಗಳು ಅಧಿಕಾರ ವ್ಯಾಪ್ತಿಗೆ ಬಂದರೆ. ೧ ರಿಂದ ೫ರವರೆಗಿನ ಹಳ್ಳಿಗಳು ಚಿಕ್ಕ ಸಂಸ್ಥಾನಗಳ ಆಡಳಿತಕ್ಕೆ ಒಳಪಟ್ಟಿರುತ್ತವೆ. ಈ ಮನೆತನಗಳು ಸುರಪುರ ಸಂಸ್ಥಾನದ ನಾಯಕ ದೊರೆಗಳಿಗೆ ಅಧೀನವಾಗಿರುತ್ತಿದ್ದವು. ನಾಡಗೌಡರು ದೊರೆಗಳಿಗೆ ಯುದ್ಧಕಾಲದಲ್ಲಿ ಸೈನಿಕ ಸಹಾಯ ಮಾಡುತ್ತಿದ್ದರು. ಪುಟವಾರಿ, ಪೋಲೀಸ್ ಮತ್ತು ಮೂಲ ಗುಜಾರಿಗಳಂಥ ಪ್ರಮುಖ ಅಧಿಕಾರ ಹಿರಿಯ ಸಂಸ್ಥಾನಗಳಿಗೆ ಮಾತ್ರ ಇರುತ್ತಿದ್ದವು.[೨೧]

ಸಾಮಾನ್ಯವಾಗಿ ಸಂಸ್ಥಾನದ ನಾಡಗೌಡರು ಒಬ್ಬಳಿಗಿಂತ ಹೆಚ್ಚು ಪತ್ನಿಯರನ್ನು ಪಡೆದಿರುತ್ತಿದ್ದರು. ತಮ್ಮ ರಾಣಿಯರು ಸುಖವಾಗಿರಲು ರಾಜರು ಅವರಿಗೆ ಅಂತಪುರದಲ್ಲಿ ಸಕಲ ಸೌಕರ್ಯಗಳನ್ನು ಒದಗಿಸುತ್ತಿದ್ದರು. ರಾಣಿಯರು ತಮ್ಮ ಪತಿಗಳ ಮೇಲೆ ವಿಶಿಷ್ಟ ಪ್ರಭಾವವನ್ನು ಬೀರಿ, ರಾಜ್ಯಾಡಳಿತದಲ್ಲಿ ಪತಿಗಿಂತ ತಮ್ಮ ಅಧಿಕಾರವನ್ನು ಉಪಯೋಗಿಸಿ ದರ್ಪಿಷ್ಠರಾಗಿ ಮೆರೆದವರಿದ್ದಾರೆ. ಆದರೆ ಇದಕ್ಕಿಂತ ಭಿನ್ನವಾಗಿ ಕೆಲವು ರಾಣಿಯರು ಅಧಿಕಾರದ ಬದುಕಿಗೆ ವಿಮುಖರಾಗಿ, ಸಮಾಜಮುಖಿಗಳಾಗಿ, ಧರ್ಮ, ಸಾಹಿತ್ಯ, ಸಂಸ್ಕೃತಿಗಳ ಬಲವರ್ಧನೆಗಾಗಿ ಪರಿಶ್ರಮಸಿದ ಧರ್ಮಿಷ್ಠರಿದ್ದಾರೆ. ಅವರಲ್ಲಿ ಪ್ರಮುಖವಾಗಿ ಮೂವರು ರಾಣಿಯವರು ಸದಾ ನಮ್ಮ ಸ್ಮರಣೆಯಲ್ಲಿರುತ್ತಾರೆ. ಅವರುಗಳೆಂದರೆ, ಗೆಜ್ಜಲಗಟ್ಟಿ ಸಂಸ್ಥಾನದ ರಾಣಿ ಲಕ್ಷ್ಮೀದೇವಿ, ಜವಳಗೆರೆ ಸಂಸ್ಥಾನದ ರಾಣಿ ಉಮನಾಬಾಯಿ ಮತ್ತು ಮಾನವಿ ಸಂಸ್ಥಾನದ ರಾಣಿ ಲಿಂಗಮ್ಮದೇಸಾಯಿಯವರು.[೨೨]

ಈ ಮೂವರು ರಾಣಿಯರು ಪತಿಪರಾಯಣತೆಯೊಂದಿಗೆ ಧರ್ಮನಿಷ್ಠರಾಗಿ ಸಮಾಜ, ಸಂಸ್ಕೃತಿ, ಸಾಹಿತ್ಯಗಳಿಗೆ ಗೈದ ಸೇವೆ ಅನುಪಮ. ಅವರು ಇಂದಿಗೆ ಒಂದು ಶತಮಾನದ ಹಿಂದ ಬಾಳಿಬದುಕಿದ್ದರು. ಸುಮಾರು ೧೮೮೪ ರಿಂದ ೧೯೫೬ರ ಅವಧಿಯಲ್ಲಿದ್ದವರು. ಸಮಾಜಕಾರ್ಯಕ್ಕೆ ತಮ್ಮನ್ನೆ ಅರ್ಪಿಸಿಕೊಂಡಿದ್ದರು. ಅವರು ಸಹಜ ರಾಜಸ ಗುಣಗಳಾದ ದರ್ಪಕ್ಕಿಂತ ಧರ್ಮನಿಷ್ಠೆಗೆ, ಭೋಗಕ್ಕಿಂತ ಯೋಗದೆಡೆಗೆ, ವಿಲಾಸಕ್ಕಿಂತ ಪೌರುಷ್ಯಕ್ಕೆ, ಅಧಿಕಾರಕ್ಕಿಂತ ಸೇವೆಗೆ ಅವರು ಸಂಪೂರ್ಣ ತಮ್ಮನ್ನು ತಾವೇ ಅರ್ಪಿಸಿಕೊಂಡಿದ್ದರು. ವೀರಶೈವ ಧರ್ಮ ಸಾಹಿತ್ಯ-ಸಂಸ್ಕೃತಿಗಳ ಅಭಿವೃದ್ಧಿಗಾಗಿ ಅಪಾರವಾಗಿ ದುಡಿದರು. ಹೀಗೆ ಅವರು ಮಾಡಿದ ಕಾರ್ಯ ಮತ್ತು ಸಾಧಿಸಿದ ಸಾಧನೆಗಳು ಅಮೋಘವಾದಂತವುಗಳಾಗಿದ್ದವು.[೨೩]

**ರಾಣಿ ಲಕ್ಷ್ಮೀದೇವಿ :** ಗೆಜ್ಜಲಗಟ್ಟ ಸಂಸ್ಥಾನದ ರಾಣಿ ಲಕ್ಷ್ಮೀದೇವಿ ತನ್ನ ಜೀವಿತ ಕಾಲದಲ್ಲಿ ಧಾರ್ಮಿಕ, ಸಾಹಿತ್ಯಿಕ, ಮತ್ತು ಸಾಂಸ್ಕೃತಿಕ ಕ್ಷೇತ್ರಗಳಿಗೆ ಗಣನೀಯ ಸೇವೆಗೈದು ಸಂಸ್ಥಾನದ ಕೀರ್ತಿಯನ್ನು ಹೆಚ್ಚಿಸಿದ್ದಾಳೆ. ೧೭ನೇ ಶತಮಾನದ ದೆಹಲಿಯ ಔರಂಗಜೇಬನ ಕಾಲದಲ್ಲಿ ಗೆಜ್ಜಲಗಟ್ಟ ಸಂಸ್ಥಾನವು ಶೌರ್ಯ ಸಾಹಸಗಳಿಗೆ ಪ್ರಸಿದ್ಧವಾಗಿತ್ತು. ಔರಂಗಜೇಬನು ದಕ್ಷಿಣದ ಮುಸ್ಲಿಂ ರಾಜ್ಯದ ಮೇಲೆ ದಂಡೆತ್ತಿ ಹೊರಟು (ಇಸ್ವಿ-೧೬೮೮) ಮಗಣಗೇರಿಗೆ ಹೋಗುವ ಮಾರ್ಗದಲ್ಲಿ ಗೆಜ್ಜಲಗಟ್ಟ ನಾಡಗೌಡರು ತಮ್ಮ ಪ್ರದೇಶದಲ್ಲಿ ಸುಲ್ತಾನನ ಕುದುರೆಗಳಿಗೆ ದವಸಧಾನ್ಯಗಳನ್ನೂ ಮತ್ತು ಆನೆಗಳಿಗೆ ಆಹಾರ ಸಾಮಾಗ್ರಿಗಳನ್ನು ಪೂರೈಸಿದ್ದರಿಂದ ಸಂತೃಪ್ತಗೊಂಡ ಔರಂಗಜೇಬನು ಕುದುರೆ ಮಾನ್ಯವೆಂದು ಭೂಮಿಯನ್ನು ಉಂಬಳಿ ನೀಡಿ ನಾಡಗೌಡರಿಗೆ ಖಿಲ್ಲತ್ ಕೊಟ್ಟನು. ಆನೆಗಳು ತಂಗಿದ್ದ ಹೊಸೂರು ಇಂದು ಆನೆ ಹೊಸೂರು ಎಂದಾಗಿದೆ. ರಾಜಾವೆಂಕಟ ಭೂಪಾಲನ (ಸು.೧೮೮೪) ಧರ್ಮಪತ್ನಿ ರಾಣಿ ಲಕ್ಷ್ಮೀದೇವಿ. ಈಕೆ ಭಕ್ತಿಪರಾಯಣೆ ಬಹುಧರ್ಮಿಷ್ಠಳು, ಗುರುಲಿಂಗ-ಜಂಗಮ ಪ್ರೇಮಿಯಾಗಿದ್ದ ರಾಣಿ ಸಂಸ್ಥಾನದಲ್ಲಿ ನಿತ್ಯದಾಸೋಹ ಮತ್ತು ಶಿವಾನುಭವಗಳು ನಡೆಯಲು ವ್ಯವಸ್ಥೆಗೊಳಿಸಿದ್ದಳು. ಜಂಗಮರ ಪಾದೋದಕ ಪ್ರಸಾದಗಳು ನಿರಂತರವಾಗಿ ಜರುಗುತ್ತಿದ್ದವು. ವಟುಗಳು ಅಭ್ಯಾಸಕ್ಕಾಗಿ ಒಂದು ಸಂಸ್ಕೃತ ಶಾಲೆಯನ್ನು ತೆರೆದಳು. ಶಿವಯೋಗ ಮಂದಿರ ಸ್ಥಾಪನೆಯಾಗುವುದಕ್ಕಿಂತ ಮುಂಚೆ ವಟುಗಳಿಗೆ ಶಿಕ್ಷಣ ಈ ಸಂಸ್ಕೃತ ಶಾಲೆಯಿಂದ ದೊರಕುತ್ತಿತ್ತು. ಕಂದಕಲ್ ಪರ್ವತಶಾಸ್ತ್ರಿಗಳು ಸಂಸ್ಕೃತ ಶಾಲೆಗಳನ್ನು ಅಭಿವೃದ್ಧಿಗೊಳಿಸಿ ಅಲ್ಲಿ ಅಪಾರವಾದ ಸಂಸ್ಕೃತ ಮತ್ತು ಕನ್ನಡ ಸಾಹಿತ್ಯ ಗ್ರಂಥ ಭಂಡಾರವನ್ನೂ ಬೆಳೆಸಿದರು. ಐತಿಹಾಸಿಕ 'ಪರಳಿ ವ್ಯಾಜ್ಯದಲ್ಲಿ ಪರ್ವತಶಾಸ್ತ್ರಿ ಮತ್ತು ಜವಳಗೆರೆ ಸಂಸ್ಥಾನದ ಆಸ್ಥಾನ ಕವಿ ಶಾಸ್ತ್ರೀ ಪಂಡಿತಾರಾಧ್ಯರು, ಇಲ್ಲಿಂದಲೇ ಸಂಸ್ಕೃತಶಾಸ್ತ್ರಗ್ರಂಥಗಳನ್ನು ಪೂರೈಸಿ ಅವರು ವೀರಶೈವರ ಪರವಾಗಿ ವಾದಗಳನ್ನು ಮಂಡಿಸಿ ವ್ಯಾಜ್ಯದಲ್ಲಿ ಜಯಗಳಿಸಿದರು. 'ಪರಳಿ ವ್ಯಾಜ್ಯ' ವೀರಶೈವಧರ್ಮ ಮತ್ತು ಸಮಾಜಕ್ಕೆ ಪ್ರತಿಷ್ಠಿತ ಪ್ರಶ್ನೆಯಾಗಿತ್ತು.[೨೪]

ರಾಣಿ ಲಕ್ಷ್ಮೀದೇವಿ ತನ್ನ ಸಂಸ್ಥಾನದಲ್ಲಿ ನಡೆಯುವ ವೀರಶೈವ ಧಾರ್ಮಿಕ ಕಾರ್ಯಗಳಿಗೆ ಅಪಾರ ಹಣವನ್ನು ವಿನಿಯೋಗಿಸಿದಳು. ರಾಣಿಯ ಧಾರ್ಮಿಕ ನಿಷ್ಠೆಯಿಂದಾಗಿ ಗೆಜ್ಜಲಗಟ್ಟ ಮರುಕಲ್ಯಾಣವೆಂದು ಕರೆಯಿಸಿಕೊಂಡಿತು. ತಮ್ಮ ಮನೆ ದೈವ ಗುಡಗುಂಟಿಯ ಅಮರೇಶ್ವರನ ನಿತ್ಯಪೂಜಾ ಕಾರ್ಯಕ್ಕೆ ೨೦೦ ಎಕರೆ ಭೂಮಿಯನ್ನು ದಾನಗೈದಳು. ದಾಸೋಹ ಮೂರ್ತಿಯಾದ ರಾಣಿ ಲಕ್ಷ್ಮೀದೇವಿ ಧರ್ಮ ಮತ್ತು ಸಮಾಜದ ಕೀರ್ತಿಯನ್ನು ಎತ್ತಿ ಹಿಡಿಯುವುದರೊಂದಿಗೆ ಗೆಜ್ಜಲಗಟ್ಟೆಯ ಹೆಸರನ್ನು ಕಲ್ಯಾಣದವರೆಗೂ ಪ್ರಸಿದ್ಧಿಗೊಳಿಸಿದಳು. ರಾಣಿಗೆ ಸಂತಾನವಿಲ್ಲದ್ದರಿಂದ ಸಿಲೋಗಲ್ ನಾಡಗೌಡರ ಮನೆತನದ ದೊಡ್ಡಬಸವಂತರಾಯನನ್ನು ದತ್ತು ಸ್ವೀಕರಿಸಿ ಸಂಸ್ಥಾನದ ವಂಶದ ಕುಡಿಯನ್ನು ಬೆಳೆಸಿದ ಕೀರ್ತಿ ಈ ಪುಣ್ಯಾಂಗನೆ ರಾಣಿ ಲಕ್ಷ್ಮೀದೇವಿಗೆ ಸಲ್ಲುತ್ತದೆ.[೨೫]

**ರಾಣಿ ಉಮನಾಬಾಯಿ :** ನಾಡಗೌಡರ ಮನೆತನದಲ್ಲಿ ಮತ್ತೊಬ್ಬ ಘನವಂತ ರಾಣಿ ಈಕೆ. ಆಡಳಿತದಲ್ಲಿ ದಕ್ಷತೆ, ಧರ್ಮ ಮತ್ತು ಸಂಸ್ಕೃತಿಗಳಲ್ಲಿ ನಿಷ್ಠೆಯುಳ್ಳ ರಾಣಿ. ಜವಳಗೆರೆ ಸಂಸ್ಥಾನದ ಆಡಳಿತ ಸೂತ್ರವನ್ನು ಹಿಡಿದುಕೊಂಡು ಸಂಸ್ಥಾನವನ್ನು ಮುನ್ನಡೆಸಿಕೊಂಡು ಹೋದ ರಾಣಿಯರಲ್ಲಿ ಉಮಾನಾಬಾಯಿ ಏಕೈಕ ಶ್ರೇಷ್ಠ ರಾಣಿಯಾಗಿದ್ದಾಳೆ.

ಜವಳಗೆರೆ ಸಂಸ್ಥಾನದಲ್ಲಿ ಆಗಿ ಹೋದ ನಾಡಗೌಡರಲ್ಲಿ ರಾಜವೆಂಕಟ ಮಹಿಪಾಲ ಬಹದ್ದೂರ್ ರು ಪ್ರಸಿದ್ಧ. ಹಾಗೆಯೇ ಈ ಮನೆತನದ ಕೊನೆಯ ನಾಡಗೌಡ ಕೂಡ ಆತನ ಕಾಲದಲ್ಲಿ ಜವಳಗೆರೆ ಸಂಸ್ಥಾನವು ವೈಭವದಿಂದ ಮೆರೆಯಿತು. ನಾಡಗೌಡರ ಶೌರ್ಯ ಸಾಹಸಗಳು ಬಹುದೂರದವರೆಗೂ ಹಬ್ಬಿತ್ತು. ಹಂಪಿಯಲ್ಲಿ ಪಂಪಾವಿರೂಪಾಕ್ಷನ ಗೋಪುರದ ಮೇಲೆ ಬಂಗಾರದ ಕಲಶವನ್ನು ಆರೋಹಣ ಮಾಡಿದ ಶ್ರೇಯಸ್ಸು ರಾಜಾವೆಂಕಟ ಮಹಿಪಾಲನದು. ಆತನಿಗೆ ಇಬ್ಬರು ಪತ್ನಿಯರು. ರಾಣಿ ನೀಲಮ್ಮ ಮತ್ತು ರಾಣಿ ಉಮನಾಬಾಯಿ. ರಾಣಿ ಉಮನಾಬಾಯಿ ಪತಿಯೊಂದಿಗೆ ರಾಜ್ಯಭಾರದಲ್ಲಿ ಸಹಕರಿಸುತ್ತಿದ್ದಳು. ಈಕೆ ಆಡಳಿತದಲ್ಲಿ ದಕ್ಷತೆಯನ್ನು ತೋರಿಸುತ್ತಿದ್ದಳು. ಸಂಸ್ಥಾನದ ಪಟವಾರಿ, ಪೋಲೀಸ್ ಮತ್ತು ಮಾಲಗು ಜಾರಿಯ ಮೂರು ಅಧಿಕಾರವನ್ನು ನಿರ್ವಹಿಸುವ ಸಾಮರ್ಥ್ಯ ಮತ್ತು ಅನುಭವಗಳು ರಾಣಿಯಲ್ಲಿದ್ದವು. ಹದಿನೈದು ವರ್ಷ ಆಡಳಿತ ಸೂತ್ರವನ್ನು (೧೮೮೭-೧೯೦೩) ವಹಿಸಿಕೊಂಡು, ಸಂಸ್ಥಾನವನ್ನು ಸುವ್ಯವಸ್ಥಿತವಾಗಿ ನಡೆಸಿದಳು. ಸ್ವತಃ ದರ್ಬರನ್ನು ನಡೆಯಿಸಿ ಪುರುಷರಲ್ಲಿ ಕಂಪನ ಮೂಡಿಸಿದಳು. ರಾಣಿ ತನ್ನ ಮುಂದಾಲೋಚನೆ ಮತ್ತು ದೃಢ ಸಂಕಲ್ಪಗಳಿಂದ ಸಂಸ್ಥಾನದ ಸ್ಥಾನಮಾನವನ್ನು ಹೆಚ್ಚಿಸಿದಳು. ಆಡಳಿತದಲ್ಲಿ ಬಿಕ್ಕಟ್ಟು ತಲೆದೋರಿದಾಗ ಅದನ್ನು ದಿಟ್ಟತನದಿಂದ ಎದುರಿಸಿ, ಪರಿಹಾರ ಕಂಡು ಕೊಳ್ಳುತ್ತಿದ್ದಳು.[೨೬]

ಜವಳಗೆರೆ ಸಂಸ್ಥಾನದ ಧರ್ಮ-ಸಾಹಿತ್ಯ-ಸಂಸ್ಕೃತಿಗಳಿಗೆ ರಾಣಿ ಉಮನಾಬಾಯಿಯಿಂದ ಅಪಾರ ಸೇವೆ ಸಂದಿದೆ. ಸಂಸ್ಥಾನಕ್ಕೆ ಆಸ್ಥಾನ ಪಂಡಿತ ಮನೆತನವನ್ನು ತಂದುಕೊಟ್ಟ ಕೊಡುಗೆ ರಾಣಿಗೆ ಸಲ್ಲುತ್ತದೆ. ಆಂಧ್ರಪ್ರದೇಶದ ಬದಗಾನಪ್ಪೆ ಮಠದ ಚರಪಟ್ಟಧ್ಯಕ್ಷರು ಈ ಆಸ್ಥಾನ ಪಂಡಿತಶಾಸ್ತ್ರೀ ಮಠದ ಮೂಲಪುರುಷರು. ಇವರಲ್ಲಿ ಪಂಡಿತಾರಾಧ್ಯಶಾಸ್ತ್ರಿ ಪ್ರಸಿದ್ಧರು. ಸಂಸ್ಕೃತ ತೆಲುಗು ಮತ್ತು ಕನ್ನಡ ತ್ರಿಭಾಷೆಗಳಲ್ಲಿ ಅವರು ಘನ ಪಂಡಿತರು. ಶಾಸ್ತ್ರೀಗಳ ವಿದ್ವತ್ತಿಗೆ ಮೆಚ್ಚಿ ರಾಣಿ ಉಮನಾಬಾಯಿ ಶಾಸ್ತ್ರೀಗಳನ್ನು ಸಂಸ್ಥಾನಕ್ಕೆ ಬರಮಾಡಿಕೊಂಡು ಮಠ ಕಟ್ಟಿಸಿಕೊಳ್ಳಲು ಭೂದಾನ ಮಾಡಿದಳು.(೧೯೦೯) ಈ ದಾನ ಪತ್ರವು ಇಂದಿಗು ಶಾಸ್ತ್ರೀಮಠದ ಮನೆತನದವರಲ್ಲಿಗೆ. ಅದು ಸಂಸ್ಕೃತ ಭಾಷೆಯಲ್ಲಿದ್ದು, ಶಿಲಾಶಾಸನದ ಮಾದರಿಯಲ್ಲಿದೆ. ಸಂಸ್ಥಾನದ ರಾಜಮುದ್ರೆಯಲ್ಲಿ ಜವಳಗೆರೆಯನ್ನು 'ದ್ವಿತಟಾಕಪುರ' ಎಂದು ಸಂಸ್ಕೃತೀಕರಣಗೊಂಡಿರುವುದನ್ನು ಇಲ್ಲಿ ಕಾಣುತ್ತೇವೆ.[೨೭]

ವೆಂಕಟಪಾಲರಿಗೆ ಸಂತಾನವಿರಲಿಲ್ಲ. ಹಿರಿಯರಾಣಿ ನೀಲಮ್ಮ ಜವಳಗೆರೆ ಸಂಸ್ಥಾನದ ಮೂಲಮನೆತನದ ರಾಜಾ ಸಂಗಮೇಶ್ವರನನ್ನು ದತ್ತು ಪಡೆದಳು. ಇತ್ತ ರಾಣಿ ಉಮನಾಬಾಯಿಯು ತನ್ನ ವಂಶದ ಪುಂಗನೂರಿನ ರಾಜಾ ಸಾಂಬಸದಾಶಿವ ರಾಜನನ್ನು ದತ್ತು ಸ್ವೀಕರಿಸಿದಳು. ರಾಜಾ ವೆಂಕಟ ಮಹಿಪಾಲನ ತಾಯಿ ರಾಣಿ ವಿಶಾಲಾಕ್ಷಮ್ಮನ ತವರೂರು ಪುಂಗನೂರು. ತಾನು ಪಡೆದ ದತ್ತು ಪುತ್ರ ತನ್ನ ಪತಿಯ ಸಂಬಂಧಿಯಾಗಿರುವುದರಿಂದ ರಾಣಿ ಉಮನಾಬಾಯಿ ತನ್ನ ದತ್ತು ಊರ್ಜಿತವಾಗುವುದೆಂದು ಆಲೋಚಿಸಿದ್ದಳು. ದತ್ತುಪಡೆದ ವಿಷಯದಲ್ಲಿ ಇಬ್ಬರೂ ರಾಣಿಯರಲ್ಲಿ ವ್ಯಾಜ್ಯವುಂಟಾಯಿತು. ತೀರ್ಪು ಹಿರಿಯರಾಣಿ ನೀಲಮ್ಮನ ಪರವಾಗಿ ಬಂದಿತು. ರಾಜಾಸಂಗಮೇಶ್ವರ ಸಂಸ್ಥಾನದ ವಾರಸುದಾರನಾಗಿ ಮುಂದುವರಿದ ಕೆಲವು ದಿನಗಳಲ್ಲಿ ರಾಣಿ ನೀಲಮ್ಮ ನಿಧನಳಾದಳು. ಸಂಸ್ಥಾನದ ಆಡಳಿತ ಉಸ್ತುವಾರಿಯನ್ನು ಮತ್ತೇ ರಾಣಿ ಉಮನಾಬಾಯಿ ವಹಿಸಿಕೊಂಡಳು. ಆ ಸಮಯದಲ್ಲಿ ರಾಣಿ ಸಂಸ್ಥಾನಕ್ಕೆ ಎದುರಾದ ಸಮಸ್ಯೆಗಳನ್ನು ತಮ್ಮ ಬುದ್ಧಿಚಾತುರ್ಯ, ಧೈರ್ಯ-ಸಾಹಸಗಳಿಂದ ಪರಿಹಾರ ಕಂಡುಕೊಂಡಳು. ಇತರ ಸಣ್ಣಪುಟ್ಟ ದೇಸಾಯಿಗಳೊಂದಿಗಿದ್ದ ವ್ಯಾಜ್ಯಗಳನ್ನು ಪರಿಹರಿಸಿಕೊಂಡಳು. ಅಂದು ಈಕೆ ತೋರಿಸಿಗ ಧೈರ್ಯ-ಸ್ಥೈರ್ಯಗಳು ರಾಣಿಯ ವ್ಯಕ್ತಿತ್ವಕ್ಕೆ ಕಳಸಪ್ರಾಯವಾಗಿದೆ. ಅವುಗಳಲ್ಲಿ ಅಂಬಾದೇವಿ ದೇವಸ್ಥಾನದ ಕಳಸಾರೋಹಣದ ಪ್ರಸಂಗ ರೋಚಕ.[೨೮]

ಜವಳಗೆರೆ ಸಂಸ್ಥಾನದಿಂದ ಆಗ್ನೇಯ ದಿಕ್ಕಿಗೆ ೩೦ ಕಿ.ಮೀ. ದೂರದಲ್ಲಿ ಪ್ರಸಿದ್ಧ ಅಂಬಾದೇವಿಯ ದೇವಸ್ಥಾನವಿದೆ. ಅದ್ವೈತ ಮತ ಚಕ್ರವರ್ತಿಗಳಾದ ಚಿದಾನಂದ ಅವಧೂತರು ಬಹುವರ್ಷಗಳ ತಪಸ್ಸಾಧನೆಯಿಂದ ಬಗುಳಾಮುಖಿದೇವಿಯನ್ನು ಶ್ರೀಚಕ್ರದಲ್ಲಿ ಆವಾಹನೆಗೊಳಿಸಿ ಅಂಬಾದೇವಿಯ

ಸಾಕ್ಷಾತ್ಕಾರಗೊಳಿಸಿದ ಪುಣ್ಯಕ್ಷೇತ್ರವದು. ಈ ದೇವಸ್ಥಾನ ತೇರಿಗೆ ಕಳಸರೋಹಣದ ಹಕ್ಕಿಗಾಗಿ ಜವಳಗೆರೆ ಸಂಸ್ಥಾನಕ್ಕೂ ಮತ್ತು ಸೋಮಲಾಪುರದ ದೇಸಾಯಿಗಳಿಗೂ ನಡುವೆ ಬಹುದಿನಗಳ ವ್ಯಾಜ್ಯ ನಡೆದಿತ್ತು. ದೇವಸ್ಥಾನ ಸೋಮಲಾಪುರದ ಸೀಮೆಯಲ್ಲಿದ್ದುದರಿಂದ ಕಳಸಾರೋಹಣ ಹಕ್ಕು ತಮಗೆ ಸೇರಿದುದು ಎಂದು ಸಿದ್ದಪ್ಪ ದೇಸಾಯಿಗಳ ವಾದ ಜವಳಗೆರೆ ಸಂಸ್ಥಾನವಾಗಿದ್ದರಿಂದ ಅವರ ಹಕ್ಕು ತಮ್ಮದೆಂದು ರಾಣಿಯ ಸಾಧನೆ. ಆ ವರ್ಷದ ಜಾತ್ರೆಯಲ್ಲಿ ತೆರಿಗೆ ಕಳಸರೋಹಣ ಮಾಡೀ ತಿರುತ್ತೇವೆಯೆಂದು ಸೋಮನಾಪುರದ ಸಿದ್ದಪ್ಪ ದೇಸಾಯಿ ಬಾಣ ಬಡಿಗೆಗಳೊಂದಿಗೆ ನೂರಾರು ಜನರನ್ನು ಕಟ್ಟಿಕೊಂಡು ಸಿದ್ಧನಾಗಿಯೇ ಬಂದನು. ಇತ್ತ ರಾಣಿ ಉಮನಾಬಾಯಿ ಪ್ರತಿವರ್ಷದಂತೆ ಮಿತವಾದ ಅಂಗರಕ್ಷಕ ದಳದೊಂದಿಗೆ ಜಾತ್ರೆಗೆ ನಡೆದಳು.[೨೯]

ಸಂಜೆಯಾಗುತ್ತಿದ್ದಂತೆಯೇ ತೇರು ಸಾಗುವ ಸಿದ್ಧತೆ ನಡೆಸಿದವು. ಭಕ್ತರು ಸಾವಿರ ಸಂಖ್ಯೆಯಲ್ಲಿ ನೆರೆದರು. ಸಿದ್ದಪ್ಪ ದೇಸಾಯಿಯ ನೂರಾರು ಬಂಟರು ಕಳಸಾರೋಹಣಗೈಯಲು ಕಟ್ಟಿಬದ್ಧರಾಗಿ ತೇರಿನ ಮುಂದೆ ಸೇರಿದರು. ಕಳಸರೋಹಣ ಮುಹೂರ್ತಕ್ಕೆ ಸರಿಯಾಗಿ ರಾಣಿ ಬೀಡುಬಿಟ್ಟಿದ್ದ ಮಂಟಪದ ಮೇಲ್ಛಾವಣಿಯಿಂದ ಯುವಕ ನಾಡಗೌಡತಿಯ ವಾರಸುದಾರನಾದ ವೆಂಕಟರಾವ್ ಕಳಸದೊಂದಿಗೆ ಕೆಳಗೆ ಜಿಗಿದು ಕೇಕೆ ಹಾಕಿ, ಕತ್ತಿಯನ್ನು ಝಳಪಿಸುತ್ತ ಜನರ ನಡುವೆ ನುಗ್ಗಿ ತೆರಿನ ಹತ್ತಿರ ಬಂದನು. ಯುವಕನ ಆ ಆರ್ಭಟ ಕೇಳಿ ರಾಣಿಯ ಅಂಗರಕ್ಷಕ ಸೈಯದ್ ಶಂಶುದ್ದೀನ್ ತನ್ನ ಕೈಯಲಿದ್ದ ಜೋಡು ನಳಿಕೆ ಬಂದೂಕಿನಿಂದ ಎರಡು ಸುತ್ತು ಗಾಳಿಯಲ್ಲಿ ಗುಂಡು ಹಾರಿಸಿದ. ಅನಿರೀಕ್ಷಿತವಾಗಿ ನಡೆದ ಈ ಆರ್ಭಟದಿಂದ ಜನ ಹೆದರಿ ಚಲ್ಲಾಪಿಲ್ಲಿಯಾದರು. ಆಗ ಸಿದ್ದಪ್ಪ ದೇಸಾಯಿಯ ಬಂಟರು ದಿಗ್ಭ್ರಮೆಗೊಂಡು ಹಿಂದಕ್ಕೆ ಸರಿದರು. ಅಷ್ಟರಲ್ಲಿ ಮೆಲ್ಗಿರಿ ಸಿದ್ದಪ್ಪ ಚಿತ್ರಲಿ ಯಮನಪ್ಪ ಮತ್ತು ನಾಯಕ ಜನಾಂಗದ ರಕ್ಷಕ ದಳದವರು ಒಮ್ಮಿಂದೊಮ್ಮೆಗೇ ಮುತ್ತಿಗೆ ಹಾಕಿ ವೆಂಕಟರಾವ್ ನಾಡಗೌಡನನ್ನು ಸುತ್ತುವರಿದರು. ಕೂಡಲೇ 'ಯುವಕ ವೆಂಕಟರಾವ್ ತೇರಿನ ಮೇಲೇರಿ ಕಳಸವನ್ನು ಆರೋಹಣ ಮಾಡಿ ಸಂಕಲ್ಪವನ್ನು ಪೂರೈಸಿದರು. ತೇರು ಸಡಗರ ಸಂಭ್ರಮದಿಂದ ಸಾಗಿತು. ಅವರೊಂದಿಗೆ ಜವಳಗೆರೆ ಸಂಸ್ಥಾನದ ಕೀರ್ತಿ ಪತಾಕೆ ಆಕಾಶದಲ್ಲಿ ವಿಜಯಿಯಾಗಿ ಹಾರಾಡಿತು.[೩೦]

ರಾಣಿ ಉಮನಾಬಾಯಿಯದು ಭದ್ರವಾದ ಶರೀರ, ಆಕರ್ಷಕ ವ್ಯಕ್ತಿತ್ವ. ಆಕೆಯನ್ನು ನೋಡಿದವರಿಗೆ ರಾಣಿಯ ಮೇಲೆ ಭಕ್ತಿ, ಭಯಗಳು ಮೂಡುತ್ತಿದ್ದವು. ರಾಣಿಯನ್ನು ನೇರವಾಗಿ ನೋಡಲಾಗುತ್ತಿರಲಿಲ್ಲ. ತಲೆಬಾಗಿಸಿ, ಬೆನ್ನು ತೋರಿಸದೆ ಹಿಂದೆ ಸರಿದು ಗೌರವ ಸಲ್ಲಿಸುವ ಪದ್ಧತಿಯಿದ್ದಿತು. ರಾಣಿ ದರ್ಬಾರನ್ನು ಬಿಟ್ಟರೆ ಮನೆ ಮತ್ತು ಹೊರಗೆ ಪರ ಪುರುಷರ ಪ್ರವೇಶವಿರುತ್ತಿರಲಿಲ್ಲ. ಹತ್ತು ವರ್ಷದ ಬಾಲಕರು

ಬಿಟ್ಟರೆ ಬೇರೆ ಪುರುಷರಿಗೆ ಅವಕಾಶವಿರಲಿಲ್ಲ. ಘೋಷಾ ಪದ್ಧತಿ ಅಂದಿನ ರಾಣಿಯರಿಗೆ ಗೌರವ ಹೆಚ್ಚಿಸುತ್ತಿತ್ತು.[೩೦]

ದರ್ಬಾರವನ್ನು ರಾಣಿ ನಡೆಸುತ್ತಿದ್ದಳು. ಕನ್ನಡ, ತೆಲುಗು ಮತ್ತು ಉರ್ದು ಭಾಷೆಗಳನ್ನು ಚೆನ್ನಾಗಿ ಬಲ್ಲವಳಲ್ಲದೆ ಅವುಗಳಲ್ಲಿ ಬರೆದು ವ್ಯವಹರಿಸುತ್ತಿದ್ದಳು. ಜವಳಗೆರೆ ೨೦ ಕಿ.ಮೀ. ದೂರದಲ್ಲಿ ತುಂಗಭದ್ರಾ ನದಿಯ ದಂಡೆಯ ಮೇಲಿರುವ ಉಪ್ಪಳ ಗ್ರಾಮದಲ್ಲಿ ಬೇಸಿಗೆ ಅರಮನೆಯನ್ನು ನಿರ್ಮಿಸಿ ರಾಣಿ ಉಮನಾಬಾಯಿ ತನ್ನ ಕೊನೆಯ ದಿನಗಳನ್ನು ಅಲ್ಲಿಯೇ ಕಳೆದಳು. ೧೯೩೬ರಲ್ಲಿ ರಾಣಿ ಉಮನಾಬಾಯಿ ತನ್ನ ೬೪ನೇಯ ವಯಸ್ಸಿನಲ್ಲಿ ನಿಧನಳಾದಳು. ಆಕೆಯ ಸಮಾಧಿ ಉಪ್ಪಳದಲ್ಲಿದೆ.[೩೧]

**ರಾಣಿ ಜಡೆಯಮ್ಮ :** ಮಾನವಿ, ಸೀಕಲ್ ಮತ್ತು ಲಾಪೂರು ಮೂರು ಹಳ್ಳಿಗಳ ನಾಡಗೌಡತಿಯ ಸರಕಾರಿ ಹಣವನ್ನು ಖಜಾನೆಗೆ ತುಂಬದೆ ಅಪವ್ಯಯ ಮಾಡಿದ ತಪ್ಪಿಗೆ ಅಂದಿನ ನಾಡಗೌಡನನ್ನು ಶಿಕ್ಷಿಸಲು ನಿಜಾಮ ಸರಕಾರದಿಂದ ಸುಬೇದಾರರು ಬರುವ ಸುದ್ಧಿ ತಿಳಿದು ನಾಡಗೌಡನು ಅಲ್ಲಿಂದ ಪಾರಾಗಿ ಗದಗಿನಲ್ಲಿ ರಕ್ಷಣೆ ಪಡೆದನು. ಸುಬೇದಾರನು ಮಾನವಿ ನಾಡಗೌಡಕಿಯನ್ನು ಅದೇ ಕುಟುಂಬದ ಮತ್ತೊಬ್ಬ ಗೌಡರಿಗೆ ಕೆಲವು ಶರತ್ತುಗಳನ್ನು ವಿಧಿಸಿ ವಹಿಸಿಕೊಟ್ಟನು. ಅದೇ ಮನೆತನದ ನಾಡಗೌಡಕಿ ಇಂದಿನವರೆಗೆ ಮುಂದುವರೆದಿದೆ. ಮೂಲ ಈ ಮನೆತನದವರು ಗದುಗಿನಲ್ಲಿ ಮಾನವಿ ಸಹೋದರರೆಂದು ಪ್ರಸಿದ್ಧರಾಗಿದ್ದಾರೆ. ಅವರಲ್ಲಿರುವ ಬಹದ್ದೂರ ಸಿದ್ರಾಮಪ್ಪ ಮಾನವಿಯವರು ಎರಡನೆಯ ಮಹಾಯುದ್ಧದ ಸಮಯದಲ್ಲಿ ಬ್ರಿಟಿಷ್ ಸೈನ್ಯ ವೆಚ್ಚಕ್ಕೆ ಆರ್ಥಿಕ ಸಹಾಯ ನೀಡಿದ್ದುದು ನಾಡಗೌಡ ಮನೆತನಕ್ಕೆ ಕೀರ್ತಿ ತಂದರೆ, ಮತ್ತೊಬ್ಬ ರಾಣಿ ಜಡೆಯಮ್ಮ ಮಹಿಳೆಯರ ಶಿಕ್ಷಣಕ್ಕೆ ತನ್ನನ್ನು ತೊಡಗಿಸಿಕೊಂಡದ್ದು ಆ ಮನೆತನದ ಕೀರ್ತಿಯ ಶಿಖರಕ್ಕೆ ಕಲಶಪ್ರಾಯವಾಗಿದೆ.[೩೩]

ರಾಣಿ ಜಡೆಯಮ್ಮ ನಾಡಗೌಡಕಿಯ ಹಮ್ಮ-ಬಿಮ್ಮುಗಳನ್ನು ಇಟ್ಟುಕೊಳ್ಳದೆ ಮನೆ ಮನೆಗೆ ಹೋಗಿ ಮಹಿಳೆಯರಿಗೆ ಶಿಕ್ಷಣ ಕೊಡಿಸಲು, ಅವರಲ್ಲಿ ಜಾಗೃತಿಯನ್ನು ತಂದುಕೊಟ್ಟದ್ದು ಮಹತ್ವವಾಗಿದೆ. ಮಹಿಳೆಯರು ಹೊರಗೆ ಬಾರದೆ ಇರುವ ಆ ಕಾಲದಲ್ಲಿ ನಾಡಗೌಡರ ಮನೆತನದ ರಾಣಿಯೊಬ್ಬಳು ಹೊರ ಬಂದು ಮಹಿಳಾ ಶಿಕ್ಷಣ ಜಾಗೃತಿಯನ್ನುಂಟು ಮಾಡಿರುವುದು ಒಂದು ಐತಿಹಾಸಿಕ ದಾಖಲೆಯೇ ಸರಿ.[೩೪]

ಒಟ್ಟಾರೆಯಾಗಿ ಇತರೆ ರಾಜ ಮನೆತನದ ರಾಣಿಯರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಕಲ್ಯಾಣ ಚಾಲುಕ್ಯರ ರಾಣಿಯರು ಉಲ್ಲೇಖಿತರಾಗಿದ್ದಾರೆ. ಜಿಲ್ಲೆಯ ಶಾಸನಗಳು ಅನೇಕ ಕಡೆ ಈ ರಾಣಿಯರು ಗ್ರಾಮಗಳನ್ನು ಆಳುತ್ತಿದ್ದುದರ ಬಗ್ಗೆ ಹಾಗೂ ಅಲ್ಲಿಯ ದೇವಾಲಯಗಳಿಗೆ ದಾನವನ್ನು ನೀಡಿ ಧರ್ಮಕಾರ್ಯಗಳನ್ನು ಮಾಡಿರುವುದರ ಕುರಿತು ಮತ್ತು ಅಂದಿನ ಕಾಲದಲ್ಲಿ ಮಹಿಳೆಯರಿಗೆ ಶಿಕ್ಷಣ ಕೊಡಿಸಲು ಅವರಲ್ಲಿ ಜಾಗೃತಿಯನ್ನು ತಂದುಕೊಟ್ಟದ್ದು ಮಹತ್ವದಾಗಿದೆ.

## ೨.೨. ರಾಣಿಯರ ಪ್ರಶಸ್ತಿ ಮತ್ತು ಬಿರುದುಗಳು

ಚಕ್ರವರ್ತಿಗಳು, ಮಹಾಮಂಡಳೇಶ್ವರ, ಮಹಾಸಾಮಂತ, ಮಹಾಸಾಮಾಂತಾಧಿಪತಿ, ಮಹಾಪ್ರಚಂಡ ದಂಡನಾಯಕ ಮೊದಲಾದವರು ಪ್ರಶಸ್ತಿಗಳನ್ನು ಧರಿಸಿದ್ದುದನ್ನು ಶಾಸನಗಳಿಂದ ನಾವು ತಿಳಿಯಬಹುದು. ಅದೇ ರೀತಿಯಾಗಿ ರಾಣಿಯರಿಗೂ ಸಹ ಪ್ರಶಸ್ತಿ ಬಿರುದುಗಳಿದ್ದುವು ಎಂಬುದನ್ನು ಶಾಸನಗಳಿಂದ ತಿಳದುಕೊಳ್ಳಬಹುದು. ಪಿತ್ರಾರ್ಜಿತವಾಗಿ ಬಂದವುಗಳನ್ನು ಪ್ರಶಸ್ತಿಗಳೆಂದೂ, ಸ್ವಾರ್ಜಿತವಾಗಿ ಬಂದವುಗಳನ್ನು ಬಿರುದುಗಳೆಂದು ಕರೆಯಲಾಗಿದೆ. ವಂಶಪಾರಂಪರ್ಯವಾಗಿ ಬಂದ ಪ್ರಶಸ್ತಿಗಳನ್ನು ಸರ್ವೇಸಾಮಾನ್ಯವಾಗಿ ಪ್ರತಿಯೊಬ್ಬರೂ ಧರಿಸುತ್ತಾರೆ. ಇವುಗಳಲ್ಲಿ ತಮ್ಮ ಮೂಲನೆಲೆ, ಮೂಲ ಪುರುಷರ ಹೆಸರು, ತಮ್ಮ ಗೋತ್ರ ಮತ್ತು ಕುಲದೇವತೆಗಳ ಹೆಸರುಗಳನ್ನು ಸೇರಿಸಿಕೊಂಡಿರುತ್ತಾರೆ.

ಚಕ್ರವರ್ತಿಯ ಇಲ್ಲವೇ ಮಹಾಮಂಡಳೇಶ್ವರರ ರಾಣಿಯರೂ ಪ್ರಶಸ್ತಿಗಳನ್ನು ಧರಿಸುತ್ತಿದ್ದರು. ಸಾಮಾನ್ಯವಾಗಿ ಎಲ್ಲಾ ರಾಣಿಯರ ಪ್ರಶಸ್ತಿ "ಸಸ್ತಿಯ ನವರತ ಪರಮ ಕಲ್ಯಾಣಭ್ಯುದಯ ಸಹಸ್ರ ಫಳಭೋಗ ಭಾಗಿನೀ ದ್ವಿತೀಯ ಲಕ್ಷ್ಮೀಸಮಾನೆ ಕಳಹಂಸಯಾನೆ ಅಗಣ್ಯ ಪುಣ್ಯ ಲಾವಣ್ಯ ಲೀಲಾಂಕ್ರಿತ ಪರಿವಾರ ಕಲ್ಪಲತೆ" ಎಂದು ಪ್ರಾರಂಭವಾಗುತ್ತದೆ. ಆಕೆ ಕಲಿತವಿದ್ಯೆ, ಪ್ರೀತಿಯ ಹೂ, ರಸಿಕ ಪ್ರಜ್ಞೆ, ಸೌಂದರ್ಯ ಮೊದಲಾದ ವಿಷಯಗಳಿಗೆ ಸಂಬಂಧಿಸಿದ ಬಿರುದುಗಳನ್ನು ಹೇಳಿದ ಮೇಲೆ ಕೊನೆಯಲ್ಲಿ ರಾಣಿಯ ಪತಿಯ ಹೆಸರನ್ನು ಹೇಳಿ ಅವನ "ವಿಶಾಳವಕ್ಷಸ್ಥಳ ನಿವಾಸಿನಿಯರಪ್ಪ ಶ್ರೀಮತು" ಎಂದು ರಾಣಿಯ ಹೆಸರನ್ನು ಹೇಳಲಾಗುತ್ತದೆ. ಉದಾ: ಚಕ್ರವರ್ತಿಯ ವಿಕ್ರಮಾದಿತ್ಯನ ರಾಣಿಯಾದ ಪದ್ಮಲದೇವಿಯು "ಸ್ವಸ್ತಿಯ ನವರತ ಪರಮಕಲ್ಯಾಣಭ್ಯುದಯ ಸಹಸ್ತ ಫಳಭೋಗಭಾಗಿನೀ ದ್ವಿತೀಯ ಲಕ್ಷ್ಮೀ ಸಮಾನೆ ಕಳಹಂಸಯಾನೆ ಅಗಣ್ಯ ಪುಣ್ಯ ಲಾವಣ್ಯ ಲೀಲಾಂಕ್ರಿತ ಪರಿವಾರ ಕಲ್ಪಲತೆ ಅರ್ತ್ಥಿಜನ ಚಿಂತಾಮಣಿ ಗೋತ್ರ ಚೂಡಾಮಣಿ ಪ್ರತ್ಯಕ್ಷ ಪಾರ್ವ್ವತಿ ಪತಿಬ್ರತಾರುಂಧತಿ ಅಭಿನವ ಸರಸ್ವತಿ ರೂಪವಿದ್ಯಾಧರಿ ಸಕಳಕಳಾಧರಿ ಮಹಾಲಕ್ಷ್ಮೀ ದೇವೀಲಬ್ಧವರ ಪ್ರಸಾದೆ ದಾನ ವಿನೋಧೆ ಶ್ರೀಮತ್ರಿಭುವನ ಮಲ್ಲದೇವ ವಿಶಾಳವೃಕ್ಷ ಸ್ಥಳ ನಿವಾಸಿನಿಯರಪ್ಪ ಶ್ರೀಮತು ಪದ್ಮಲದೇವಿಯರು" ಎಂದು ಪ್ರಶಸ್ತಿ ಬಿರುದುಗಳನ್ನು ಧರಿಸಿರುತ್ತಿದ್ದರು.[೩೪]

ರಾಯಚೂರು ಜಿಲ್ಲಾ ಲಿಂಗಸೂಗೂರಿನ ಕಲ್ಲೇಶ್ವರ ದೇವಾಲಯದಲ್ಲಿ ಶಾಸನವು ವಿಕ್ರಮಾದಿತ್ಯನ ರಾಣಿಯಾದ ಅಬ್ಬಲದೇವಿಗೆ ಸಹಸ್ರಫಳ ಭೋಗಭಾಗಿನಿ ದ್ವಿತೀಯ ಲಕ್ಷ್ಮೀ ಸಮಾನೆ, ಕಳಹಂಸಯಾನೆ ರೂಪವಿದ್ಯಾಧರಿ ಕಸ್ತೂರಿಕಾಮೋದೆ ಎಂಬ ವಿಶೇಷಣಗಳಿಂದ ಹೋಗಳಲಾಗಿದೆ. ಇದೇ ರೀತಿಯಾಗಿ ವಿಕ್ರಮಾದಿತ್ಯನ ರಾಣಿಯರ ಪ್ರಶಸ್ತಿ ಬಿರುದುಗಳು ಬರುತ್ತವೆ.[೩೫] ಮುಕ್ಕುಂದಿಯ ಮುರಹರಿ ದೇವಾಲಯದ

ಬಲಗಡೆ ನಿಲ್ಲಿಸಿರುವ ಶಾಸನದಲ್ಲಿ ಕಣ್ಣರಸನ ಸತಿಯನ್ನು ಗುಣವತಿ ಯಶೋವತಿ, ಯಶೋವತಿ, ರೂಪವತಿ, ಭೋಗವತಿ, ಲೀಲಾವತಿ, ಮಹಿಮಾವತಿ, ಕಾವಬ್ಬರಸಿ ಎಂದು ಉಲ್ಲೇಖಿಸಲಾಗಿದೆ. ಇದೇ ತೆರನಾಗಿ ಸೋಮಲಿಂಗೇಶ್ವರ ದೇವಾಲಯದ ಎಡಭಾಗದಲ್ಲಿನ ಶಾಸನದಲ್ಲಿಯೂ ಕೂಡ ಕಾವಬ್ಬರಸಿಯನ್ನು ಹೊಗಳಲಾಗಿದೆ. ಕಾಲ ಕ್ರಿ.ಶ.೨೩-೭-೧೧೮೪, ಸಂ.೫, ಪು.ಸಂ.೩೫೪) ಒಂದು ವೇಳೆ ಇವರು ಪಟ್ಟದರಾಣಿಯರಾಗಿದ್ದರೆ. 'ಪಟ್ಟಮಹಾದೇವಿ'ಯೆಂದು. ಹಿರಿಯ ರಾಣಿಯಾಗಿದ್ದರೆ, 'ಪಿರಿಯರಸಿ' ಎಂದು ಅವರನ್ನು ಕರೆಯುತ್ತಿದ್ದರು.[೩೭]

ಇವರ ರೂಪ ಹವ್ಯಾಸ ಮೊದಲಾದವುಗಳನ್ನು ಹೇಳಿರುವುದಕ್ಕೆ ಉದಾಹರಣೆಯಾಗಿ ಮಹಾ ಮಂಡಳೇಶ್ವರ ಹರಿಕೇಸರಿ ದೇವನ ಹೆಂಡತಿ ಲಚ್ಚಲದೇವಿಯ ಪ್ರಶಸ್ತಿಯನ್ನು ಇಲ್ಲಿ ಕೊಡಲಾಗಿದೆ. "ಶೃಂಗಾರ ಗಂಗಾತರಂಗಿಣಿ ದಾನ ಚಿಂತಾಮಣಿ| ಗಿರಿಲಬ್ಬವರ ಪ್ರಸಾದೆ ಚಂಪಾಕಾಲೋದೆ| ವಿವೇಕ ವಿದ್ಯಾಧರಿ ಸಕಳಕಳಾಧರಿ ಗೋತ್ರ ಪವಿತ್ರ ದುರ್ವ್ವಾಕುರ ಶ್ಯಾಮಗಾತ್ರೆ| ಯಾಸ್ಥಾನ ರಂಜನೆ| ಸವತಿಯದಭಂಜನೆ ಉಪ್ಪಟ್ಟವರ್ಷೆ ಧರ್ಮ್ಮಸಂಕರ್ಷೇ ಶ್ರೀಮಾನ್ ಹರಿಗಮನ ಸ್ಸರೋವರ ರಾಜಹಂಸಿ | ಸುಭಗವಿಳಾಸಿ ಹರಿಗನದ್ಧಾಗಿಂ|"[೩೮]

ಈ ತೆರನಾದ ಪ್ರಶಸ್ತಿಯನ್ನು ಸಾಮಾನ್ಯವಾಗಿ ಪ್ರತಿಯೊಬ್ಬ ಅರಸಿಯರು ಧರಿಸುತ್ತಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಸವತಿಯರಿದ್ದಾರೆ ಅವರ ನಡುವಿನ ದ್ವೇಷ 'ಸವತಿಮದಭಂಜನೆ' ಎಂಬ ಬಿರುದಿನಿಂದ ಸೂಚಿತವಾಗಿರುವುದನ್ನು ನೋಡಬಹುದು. ಇಂಥ ವೈಯಕ್ತಿಕ ಪ್ರಶಸ್ತಿ ಬಿರುದುಗಳನ್ನು 'ರಾಣಿಯರು' ಧಗಿಸುತ್ತಿದ್ದಾರೆಂದು ಇತಿಹಾಸದ ಮೂಲದಿಂದ ತಿಳಿದುಕೊಳ್ಳಬಹುದಾಗಿದೆ.

**ಅಡಿಟಿಪ್ಪಣಿಗಳು**

೧. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೩೬೩

೨. ಭಾರತಿ, ರಾಯಚೂರು ಜಿಲ್ಲಾ ಶಾಸನಗಳ ಸಮಗ್ರ ಅಧ್ಯಯನ, ಪು.೫೮

೩. ಚೆನ್ನಕ್ಕ ಪಾವಟೆ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪು.೪

೪. ನಾಗಯ್ಯ ಜೆ.ಎಂ., ಆರನೇ ವಿಕ್ರಮಾದಿತ್ಯನ ಶಾಸನಗಳ ಒಂದು ಅಧ್ಯಯನ, ಪು.೨೮

೫. ದೇವರಕೊಂಡಾರೆಡ್ಡಿ(ಸಂ), ರಾಯಚೂರು ಜಿಲ್ಲಾ ಶಾಸನ ಸಂಪುಟ ೭, ಪು.೧೨೩

೬. ಅದೇ, ಪು.೧೭೯

೭. ಅದೇ, ಪು.೩೦೫

೮. ಅದೇ, ಪು.೩೦೪

೯. ಅದೇ, ಪು.೩೧೬

೧೦. ಅದೇ, ಪು.೨೫೭

೧೧. ಅದೇ, ಪು.೨೪೩

೧೨. ಅದೇ, ಪು.೨೬೨

೧೩. ಅದೇ, ಪು.೨೭೨

೧೪. ಅದೇ, ಪು.೩೦೦

೧೫. ಅದೇ, ಪು.೩೦೪

೧೬. ಅದೇ, ಪು.೩೦೭

೧೭. ಅದೇ, ಪು.೩೦೮

೧೮. ಅದೇ, ಪು.೩೧೩

೧೯. ಅದೇ, ಪು.೩೨೩

೨೦. ಅದೇ, ಪು.೩೭೬

೨೧. ಶಾಶ್ವತಸ್ವಾಮಿ ಮುಕ್ಕುಂದಿಮಠ, ಕೃಷ್ಣತುಂಗೆ ನೆಲದ ಸಿರಿ, ಪು.೫೫

೨೨. ಅದೇ, ಪು.೮೫

೨೩. ಅದೇ, ಪು.೮೬

೨೪. ಅದೇ, ಪು.೮೭

೨೫. ಅದೇ, ಪು.೮೮

೨೬. ಅದೇ, ಪು.೮೯

೨೭. ಅದೇ, ಪು.೯೦

೨೮. ಅದೇ, ಪು.೯೧

೨೯. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು.೩೯೨

೩೦. ದೇವರಕೊಂಡಾರೆಡ್ಡಿ(ಸಂ), ಪೂರ್ವೋಕ್ತ, ಪು.೧೨೩

೩೧. ಅದೇ, ಪು.೩೫೪

೩೨. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು.೩೯೩

# ಅಧ್ಯಾಯ ೩

# ಸಾಮಾನ್ಯ ವರ್ಗದ ಮಹಿಳೆಯರು

೩.೧. ವೃತ್ತಿಕಾರರು

೩.೨. ಗ್ರಾಮೀಣ ಮಹಿಳೆ

೩.೩. ಕೆಳವರ್ಗದ ಮಹಿಳೆ

೩

# ಸಾಮಾನ್ಯ ವರ್ಗದ ಮಹಿಳೆಯರು

ಶಾಸನಗಳು ನಮ್ಮ ಇತಿಹಾಸವನ್ನರಿಯಲು ಮಹತ್ವಪೂರ್ಣವಾದ ದಾಖಲೆಗಳಾಗಿವೆ. ಒಮದು ದೇಶದ ಇತಿಹಾಸದ ರಚನೆಗೆ ಶಾಸನಗಳು ಅಮುಲ್ಯವಾದ ಆಧಾರಗಳು. ಇಡಿಹಾಸವನ್ನು ರಚಿಸುವ ಕೆಲಸವೊಂದೇ ಅಲ್ಲದೇ ಶಾಸನಗಳು ಅಂದಿನ ಜನರ ಬದುಕನ್ನು ಬಿಂಬಿಸಿ ಸಂಸ್ಕೃತಿಯನ್ನು ಎತ್ತಿ ತೋರಿಸುವ ಅದ್ವಿತೀಯ ಹಾಗೂ ಅಪೂರ್ವ ಕೊಡುಗೆಗಳಾಗಿವೆ. ರಾಜಮಹಾರಾಜರು, ಸಾಮಂತರು, ರಾಣಿಯರು, ಸಾಮಂತರಸರು, ಲೋಕಕ್ಕೆ ಅರಸರಿಗೆ ದೇಶಕ್ಕೆ ಸುಖವಾಗಲೆಂದು ಹಾರೈಸಿ ದಾನ ಮಾಡಿದ ವಿವರಗಳು ಶಾಸನಗಳಲ್ಲಿ ಉಲ್ಲೇಖಿತವಾಗಿವೆ. 'ರಾಜ್ಯಡಳಿತವು ಸುಗಮವಾಗಿ ಸಾಗಲು ಅರಸನಷ್ಟೇ ಅಲ್ಲದೆ ರಾಣಿಯರು ಹಾಗೂ ಅವರ ಕೈ ಕೆಳಗಿನ ಅಧಿಕಾರಿ ವರ್ಗದವರು ಕಾರಣರಾಗಿರುತ್ತಾರೆ. ಇವರ ವಂಶಪರಂಪರ್ಯ, ಮಾಂಡಳಿಕರಲ್ಲಿ ಅಧಿಕಾರದ ವಿವಿಧ ಹಂತಗಳಲ್ಲಿ ಸುಂಕದ ವಸುಲಿಕಾರರಾಗಿ ನಾಡಗೌಡರಾಗಿ, ಗಾವುಂಡರಾಗಿ ಕಾರ್ಯನಿರ್ವಹಿಸುತ್ತಿದ್ದರು. ಹೀಗೆ ವಿವಿಧ ಅಧಿಕಾರಿಗಳಿದ್ದು ದೇವಾಲಯ ನಿರ್ಮಾಣ, ಕೆರೆ-ಬಾವಿಗಳ ನಿರ್ಮಾಣ, ಮುಂತಾದ ಜನೋಪಯೋಗಿ ಕೆಲಸಗಳನ್ನು ಮಾಡಿರುತ್ತಿದ್ದರು. ದೇವಾಲಯಗಳು ಭಕ್ತಿ ಭಾವಗಳಿಂದ ನಿರ್ಮಾಣವಾದರೆ, ಸಾರ್ವಜನಿಕರ ಹಿತಕ್ಕಾಗಿ ಕೆರೆ-ಬಾವಿ ಸತ್ರಗಳು ಜನ್ಮತಳೆದವು.[೧]

ಸಾಮಾನ್ಯವರ್ಗದ ಮಹಿಳೆಯರು ಉನ್ನತವರ್ಗದ ಮಹಿಳೆಯರಂತೆ ಸ್ವತಂತ್ರವಾಗಿ ದೇವಸ್ಥಾನ ನಿರ್ಮಾಣ ಮಾಡಿ ಅದರ ಪೂಜೆ, ಪುನಸ್ಕಾರಕ್ಕೆ ದತ್ತಿ ಬಿಟ್ಟುಕೊಡುವಷ್ಟು ಯೋಗ್ಯತೆ ಇಲ್ಲದೆ ಹೋದರು ಅವರಿಗೆ ಕೈಲಾದ ದಾನ ಮಾಡಿದ ಗೌರವ ಅವರಿಗಿದೆ. ದೇವಸ್ಥಾನ ನಿರ್ಮಾಣದಂತಹ ದೊಡ್ಡ ಮೊತ್ತದ ದಾನಕಾರ್ಯವನ್ನು ಪ್ರಭುವರ್ಗ ಕೈಕೊಂಡರೆ ದೇವರ ಪೂಜೆ ಪುನಸ್ಕಾರ, ದೇವಾಲಯದ ಜೀರ್ಣೋದ್ಧಾರ ನಂದಾದೀವಿಗೆಗಳಿಗೆ ದಾನ ನೀಡಿದವರು ಸಾಮಾನ್ಯ ವರ್ಗದವರು. ಹೀಗಾಗಿ ಇಲ್ಲಿ ಒಬ್ಬರು ಸಂಸ್ಥಾಪಕರಾದರೆ, ಇನ್ನೊಬ್ಬರು ವ್ಯವಸ್ಥಾಪಕರಾಗಿ ಹಾಗೂ ನಿರ್ವಹಣೆಗಾರರಾಗಿಯೂ ಕಂಡುಬರುತ್ತಾರೆ. ಸಾಮಾನ್ಯ ವರ್ಗದ ಮಹಿಳೆಯರು ಬಿಟ್ಟುಕೊಡುವ ದತ್ತಿಯ ಮೊತ್ತ ಕಡಿಮೆಯಾಗಿರುತ್ತಿದ್ದುದರಿಂದ ಅದನ್ನು ರಕ್ಷಿಸಿಕೊಂಡು

ಹೋಗುವ ಆಚಾರ್ಯವರ್ಗದ ಅವಶ್ಯಕತೆ ಮೇಲುವರ್ಗದ ದತ್ತಿ ಸಂದರ್ಭದಂತೆ ಇಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. "ಕೊಟ್ಟ ದಾನವನ್ನು ಕಾಪಾಡಿದವರು ದಾತಾರರಪ್ಪರು' ಎಂಬ ನೀತಿ ಮಾತು ಈ ದಾನಗಳ ಹಿಂದೆ ಧ್ವನಿಸುತ್ತದೆ. ಈ ದಾನಗಳಲ್ಲಿ ಸಮಾವೇಶವಾದವರು ಸೆಟ್ಟಿಗಳಂತಹ ಶ್ರೀಮಂತವರ್ಗದ ಗಾವುಂಡುಗಳಂತಹ ಅಧಿಕಾರಿವರ್ಗದ ಮತ್ತು ಇತರ ಸಾಮಾನ್ಯ ವರ್ಗದ ಸ್ತ್ರೀ ಪುರುಷರು. ಆರ್ಥಿಕ ಸಂತೃಪ್ತಿಯ ಈ ಗಾವುಂಡ ಸೆಟ್ಟಿಕುಂಟುಬಗಳ ಒಲವು ಸಹಜವಾಗಿ ಧರ್ಮಮುಖಿಯಾಗಿದೆ. ಇಲ್ಲಿ ತಮ್ಮ ಪರಿಸರದ ಹಿತದೃಷ್ಟಿಯೇ ಪ್ರಧಾನ. ಪರಲೋಕ ಹಿತಾರ್ಥವಾಗಿ ಪರೋಕ್ಷವಿನಯವಾಗಿ ಮಾಡಿದ ದಾನ ಇಲ್ಲಿ ಅತ್ಯಂತ ಕಡಿಮೆ. ಈ ವರ್ಗದ ಹೆಣ್ಣು ಮಕ್ಕಳೂ ವೈಯಕ್ತಿಕ, ಕೌಟುಂಬಿಕ ಮತ್ತು ಸಾಮಾಜಿಕ ದಾನ ಕಾರ್ಯಗಳನ್ನು ಮಾಡಿರುವರು.[೨]

"ವಸುದೆಯೆಲ್ಲಲುಂ ಕೆರೆ ಭಾವಿದೀರ್ಗ್ಘಗೆ ದೇಗುಲಂ ಪೊದೋಟಂ ಛತ್ರಂಗಳಿಂ
ಮುಸುಕಿ ಮಾಣ್ದನೆ ಪುಣ್ಯತೀರ್ಥಗಳುಳ್ಳನಿತುಮಂ ನೆಲೆಮಿಂದು ಬ್ರಾಹ್ಮಣರ್ಗ್ಗೆ
ಪೆಸರ ದಾನಂಗಳನಿತುಯಂ ಪೊಣ್ದೆತ್ತುಂ ಮಂಗಳಾ ಚಾರದಿಂದ ಕಲಿದೋಷಮಂ
ಪೊಸೆದು ಬಿಸುವಂ ಮಹಾದಾನಿ ಚಕ್ರೇಶಂ ತ್ರಿಭುವನಮಲ್ಲದೇವಂ"

ಸಾಲುಗುಂದ ಶಾಸನದ ಈ ವಿವರಗಳನ್ನು ನೋಡಿದರೆ ರಾಜ-ಪ್ರಜೆಗಳು ಸಾರ್ವಜನಿಕರ ಚಟುವಟಿಕೆಗಳಲ್ಲಿ ತಮ್ಮನ್ನು ಹೇಗೆ ತೊಡಗಿಸಿಕೊಳ್ಳುತ್ತಿದ್ದರೆಂಬುದು ಸ್ಪಷ್ಟವಾಗುತ್ತಿದೆ. ನಾಗದೇವ ದಂಡನಾಯಕನು ಸಾಲಗುಂದಿಯಲ್ಲಿ ಬಾವಿದೇಗುಲಂ ಕೆರೆ ನಿರ್ಮಾಣವುಳ್ಳ ಪೋಕ್ಕರಣೆ ದೀರ್ಗ್ಘಗೆ ದೇವವಿಲಾಸ... ನಂದಸಾವಳಿ ಛತ್ರ" ಮೊದಲಾದವುಗಳನ್ನು ನಿರ್ಮಿಸಿದನು. ಈ ಶಾಸನದಲ್ಲಿ ನಾಗದೇವನ ತಂದೆ ಸೋಮನೆಂಬುವವ ಮತ್ತು ತಾಯಿ ಜಕ್ಕಣಾಂಬಿಕ ಎಂದು ಉಲ್ಲೇಖಿಸಲಾಗಿದೆ. ಕಾಲ ಕ್ರಿ.ಶ.೧೦೮೫, ಪು.ಸಂ.೩೫೯[೩]

ದೇವದುರ್ಗ ತಾಲೂಕಿನ ಗಬ್ಬೂರು ಗ್ರಾಮದಲ್ಲಿ ಮುಸ್ಯಾಣಭಟ್ಟ ಮತ್ತು ಅವನ ಪತ್ನಿ ಬ್ರಾಹ್ಮಣಿ ನಾಲಿಕಬ್ಬೆಯರು ಮಹಾದೇವರ ದೂಪ, ದೀಪ, ಮತ್ತು ಪೂಜಾಕಾರ್ಯಗಳಿಗಾಗಿ ಭೂದಾನ ನೀಡಿರುವಂತೆ ಶಾಸನದಲ್ಲಿ ಹೇಳಲಾಗಿದೆ(ಕಾಲ ಕ್ರಿ.ಶ.೨೪-೧೨-೧೧೧೮ ಪು.ಸಂ.೪೫, ದೇವ.೧).[೪] ಗಬ್ಬೂರಿನ ತ್ರಿಪುರಾಂತಕ ದೇವರ ಉತ್ತರಕ್ಕಿರುವ ಪ್ರಸನ್ನ ಕೇಶವ ದೇವರ ಪೂಜೆ ಇತ್ಯಾದಿಗಳಿಗೆ ಚಾಮಿಕ ವೈಯ ಕೇಸವನು ಮಾಲೆಗಾರ ಮಲ್ಲೆಯನ ಮಗಂ ಸೋವಣನ ಕೈಯಲ್ಲಿ ತೋಟವನ್ನು ಕೊಂಡು ದೇವರಿಗೆ ದಾನ ಬಿಟ್ಟ ವಿಷಯ ತಿಳಿಸುತ್ತದೆ(ಕಾಲ ಕ್ರಿ.ಶ.೧೧೫೪, ಪು.೫೨-೪).[೫] ಅದೇ ರೀತಿಯಾಗಿ ಅದೇ ಊರಿನ ಹರಹರೇಶ್ವರ ದೇವಾಲಯದಲ್ಲಿರುವ ಶಾಸನವು ಸೋಮೇಶ್ವರಭಟ್ಟರ ಮಗಳು ಲಕ್ಷುಮಕ್ಕ ತನ್ನ ತಂದೆ ಗೊಬ್ಬೂರಲ್ಲಿ ಪ್ರತಿಷ್ಠ ಮಾಡಿಸಿದ ಹರಿಹರ ದೇವರಿಗೆ ತನ್ನ ಭಾಗವಾಗಿ ಬಂದ ಬೆಳೆಯ ಭಾಗವನ್ನು ಕೋಟಿ ಹೋಮಕ್ಕೆ

ಮತ್ತು ಸಿದ್ಧ ಸೋಮನಾಥ ದೇವರ ಪೂಜೆ, ಪುನಸ್ಕಾರ, ಧೂಪ, ದೀಪ, ನೈವೇದ್ಯ, ವಸ್ತ್ರಾಲಂಕಾರ ಚೈತ್ರಪೈತ್ರ ಧರ್ಮದ ಏತಕ್ಕೆ ಸಲ್ಲುವಂತೆ ತನ್ನ ತಂದೆಗೆ ತನಗೆ ತನ್ನ ಗಂಡನ ಶ್ರೇಯೋಭಿವೃದ್ಧಿಗೆ ದಾನ ಬಿಡುತ್ತಾಳೆ.[೬] ದೇವದುರ್ಗದ ಈರಣ್ಣದೇವರ ಗುಡ್ಡದ ಮೇಲಿನ ಉಬ್ಬುಶಿಲ್ಪಗಲನ್ನು ಬಿಡಿಸಿರುವ ದೊಡ್ಡ ಬಂಡೆಯ ಮೇಲಿನ ಶಾಸನ ಕಾಸಲಯ್ಯ ಗಾವುಂಡನ ವಂಶಜರು ದೇವರುದುರ್ಗವನ್ನು ನಿರ್ಮಿಸಿ, ಕೆರೆ ಕಟ್ಟಿಸಿ, ಊರಿನ ಗೋವರ್ದನ ಗೋಪಾಲಕೃಷ್ಣನ ಪ್ರತಿಷ್ಠೆ ಮಾಡಿಸಿ, ಪೇಟೆ ಕಟ್ಟಿಸಿದ ಮತ್ತು ಸಂತೆ ಸೇರಿಸಿದ ವಿಷಯವನ್ನು ಹೇಳುತ್ತದೆ. ಮುಂದೆ ಶಾಸನದಲ್ಲಿ ಅವನ ವಂಶವನ್ನು ವಿವರಿಸುತ್ತಾ ಅವನಿಗೆ ಇಬ್ಬರು ಹೆಂಡತಿಯರು ಲಕ್ಷ್ಮವ್ವ ಮತ್ತು ವಂಕಮ್ಮ ಎಂದು ಇವರಿಬ್ಬರಿಗೆ ಏಳು ಜನ ಗಂಡು ಮಕ್ಕಳು ಮತ್ತು ಹೆಣ್ಣು ಮಕ್ಕಳಾದ ವೀರಮ್ಮ, ಕಾನವ್ವ, ಸಕರವ್ವ, ಕೃಷ್ಣಂಮ, ಸಕ್ಕರೆವ್ವ, ವರದವ್ವ, ಲಿಂಗಮ್ಮ, ವೆಂಕಮ್ಮ ಎಂಬ ವಿಷಯವನ್ನು ಉಲ್ಲೇಖಿಸುತ್ತದೆ. ಕಾಸಲಯ್ಯನನ್ನು ಚಿಕ್ಕಕಾಸಲಯ್ಯಗವುಡ ಎಂದು ಕರೆಯುತ್ತಿದ್ದರು.[೭]

ಮಸ್ಕಿಯ ಹಾಳು ಕ್ಯಾತನಹಟ್ಟಿಯ ಆಂಜನೇಯ ದೇವಾಲಯದ ಎದುರು ಇರುವ ಶಾಸನವು ಪರಕಾರ ಎಳಮೋಜೆಂಸೆ ಮಗಳು ಸೋಮಕ್ಕೆ ಎಂಬುವವಳು ೧೪ ಮತ್ತರು ಭೂಮಿಯನ್ನು ಪಂಚಲಿಂಗಕ್ಕೆ ನೀಡಿದ ವಿಷಯವನ್ನು ವಿವರಿಸುತ್ತದೆ. ಸಾಲಗುಂದೆ ಕಾಲಕಾಲೇಶ್ವರ ದೇವಾಲಯದ ನವರಂಗದಲ್ಲಿನ ಶಾಸನವು ಕಾಳಿದಾಸ ಚಮೂಪ ಅವನ ಪತ್ನಿ ಕರ್ಣಾಂಬೆಯರ ಮಗ ನಾಚದಂಥಾದಿಪನು ಕಾಲೇಶ್ವರ ದೇವಾಲಯವನ್ನು ಕಟ್ಟಿಸಿದ ವಿಷಯ ತಿಳಿಸುತ್ತದೆ. ಮುಕ್ಕುಂದಿಯ ಸೋಮಲಿಂಗೇಶ್ವರ ದೇವಾಲಯದಲ್ಲಿರುವ ಶಾಸನದಲ್ಲಿ ಕಣ್ಣರಸನು ಇವನ ಪತ್ನಿ ಕಾವಬ್ಬರಸಿ ಇವರ ಮಗ ಗೋನ ಮತ್ತು ಇವನ ತಮ್ಮ ಬಾಚ ಭೂಪ. ಇವನು ವಿಷ್ಣು ದೇವಾಲಯವನ್ನು ಮತ್ತು ಸಭಾವಾಸದೊಂದಿಗೆ ಬಾಚೇಶ್ವರ ದೇವಾಲಯವನ್ನು ಮಾಡಿಸಿದ ವಿಷಯ ತಿಳಿಸುತ್ತದೆ.[೮]

ಅದೇ ರೀತಿಯಾಗಿ ರಾಯಚೂರಿನ ಮಡ್ಡಿಪೇಟೆಯ ಮೋಹಲ್ಲಾಸವರ ಮಸೀದಿಯಲ್ಲಿ ದೊರೆತ ಶಾಸನವು ಪರ್ಷಿಯನ್ ಭಾಷೆಯಲ್ಲಿದ್ದು. ಅಬ್ದುಲ್ಲಾನ ಮಸೀದಿಯ ಕೆಲಸವು ೨೭ ಜುಮದ್ ೧೧ ಆ.ಹಿ.೧೧೯೭(ಜೂನ್ ೯, ೧೭೮೨)ರಲ್ಲಿ ಆರಂಭಗೊಂಡು ೨೨ ತಿಂಗಳುಗಳ ನಂತರ ಅಂದರೆ ೧೧-೧೧ ಅ.ಹಿ.೧೧೯೮(ಕ್ರಿ.ಶ.೧೭೮೪, ಮಾರ್ಚ್ ೪)ರಲ್ಲಿ ಸಂಪೂರ್ಣವಾಯಿತು ಎಂದು ಹೇಳುತ್ತದೆ. ಶುಜಾವುಲ್ ಮುಲ್ಕ ಮತ್ತು ಜುಲ್ಫಿಖಿರುಡ್ ದನ್‌ಲಾಹನ ಕಾಲದಲ್ಲಿ ಗುಲಾಮ್ ಮಹಮ್ಮದನ ಮೇಲ್ವಿಚಾರಣೆಯಲ್ಲಿ ಸಂತ ಹಾಜಿ ಬಖ್ತಿಯ ಎಂಬ ಮಹಿಳಾ ಅನುಯಾಯಿ ಇದರ ನಿರ್ಮಾತೃ ಎಂದು ಈ ಶಾಸನದಲ್ಲಿ ಉಲ್ಲೇಖಿಸಲಾಗಿದೆ.[೯] ಹೀಗೆ ರಾಯಚೂರು ಜಿಲ್ಲೆಯಲ್ಲಿಯೂ ಸಹ ಅನೇಕ ಸಾಮಾನ್ಯ

ವರ್ಗದ ಮಹಿಳೆಯರು ಸಹ ಅಗ್ರಹಾರ ದೇವಾಲಯ, ಕೆರೆ-ಬಾವಿ ಸಾಮಾಜಿಕ ಸೇವಾ ಕಾರ್ಯಗಳಲ್ಲಿ ಪಾಲ್ಗೊಂಡಿರುವುದನ್ನು ಶಾಸನಗಳಿಂದ ತಿಳಿದುಬರುತ್ತದೆ.

## ೩.೧. ವೃತ್ತಿಕಾರರು

ಭಾರತದಲ್ಲಿ ಜಾತಿ ವ್ಯವಸ್ಥೆಯು ಪ್ರಾಚೀನ ಕಾಲದಿಂದಲೂ ಬೆಳೆದು ಬಂದುದ್ದಾಗಿದೆ. ಇಲ್ಲಿನ ಜನರಲ್ಲಿ ಬೇರೆ ಬೇರೆ ವೃತ್ತಿಗಳನ್ನವಲಂಬಿಸಿ ಬೇರೆ ಬೇರೆ ಜಾತಿಗಳು ಹುಟ್ಟಿಕೊಂಡವು. ವರ್ಣ ವ್ಯವಸ್ಥೆಗಿಂತ ಕಟ್ಟುನಿಟ್ಟಾದ ಈ ಜಾತಿ ವ್ಯವಸ್ಥೆಯು ಮುಂದೆ ವೃತ್ತಿ ವಿಭಾಗವಾಗಿ ಪರಿಗಣಿಸಿ ಅವರು ಅನುಸರಿಸುವ ಉದ್ಯೋಗದ ·ಮೇಲೆಯೇ ನಿಂತಿತು. ಆ ಕಾಲದಲ್ಲಿ ಮಹಿಳೆಯರು ಹಲವಾರು ಚಟುವಟಿಕೆಗಳಲ್ಲಿ ತೊಡುಗುತ್ತಿದ್ದರು. ಅಂದರೆ ಮಡಿಕೆ ತಯಾರಿಕೆ, ಬುಟ್ಟಿ ಮತ್ತು ಚಾಪೆ ಹೆಣೆಯುವುದು, ಹೂಗಳನ್ನು ಕಟ್ಟುವುದು, ಬಟ್ಟೆ ನೇಯುವುದು ಮತ್ತು ಬಟ್ಟೆ ಹೊಲಿಯುವುದು ಅದೇ ರೀತಿಯಾಗಿ ಬಟ್ಟೆಗಳನ್ನು ತೊಳೆಯುವುದು ಮತ್ತು ಅಡಿಗೆ ಕೆಲಸ ಮಾಡುವುದು ಹೀಗೆ ಇತ್ಯಾದಿ ಕೆಲಸಗಳಲ್ಲಿ ಸ್ತ್ರೀಯು ತನ್ನನ್ನು ತಾನು ತೊಡಗಿಸಿಕೊಳ್ಳುತ್ತಿದ್ದಳು. ಹಾಗೆಯೇ ಅವರು ಬಿಲ್ಲು ಬಾಣಗಳನ್ನು ಸಹ ತಯಾರಿಸುತ್ತಿದ್ದರು.

ಹಿಂದಿನ ಕಾಲದಲ್ಲಿ ಸ್ತ್ರೀಯರು ಮತ್ತು ದೇವಾಲಯಗಳ ನಡುವೆ ಉತ್ತಮವಾದ ಸಂಬಂಧವಿತ್ತು. ದೇವಾಲಯವೇ ಧರ್ಮದ ಚಿಹ್ನೆಯಾಗಿತ್ತು. ದೇವಾಲಯಗಳಲ್ಲಿ ಸ್ತ್ರೀಯರು ಉದ್ಯೋಗಸ್ಥರಾಗಿ ಸೇರಿ ಹಲವಾರು ರೀತಿಗಳಲ್ಲಿ ತಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ಸೇವೆ ಸಲ್ಲಿಸುತ್ತಿದ್ದರು. ಅಂದರೆ ನೃತ್ಯ, ಸಂಗೀತ, ಹಾಡುಗಾರಿಕೆ ಹಾಗೂ ಇತರ ಸೇವೆ ಸಲ್ಲಿಸುತ್ತಿದ್ದರು.[೧೦] ಸ್ತ್ರೀಯರು ಭೂಮಿಯ ವ್ಯವಸಾಯದಲ್ಲೂ ಮಹತ್ವವಾದ ಪಾತ್ರನಿರ್ವಹಿಸುತ್ತಿದ್ದರು. ಅವರು ಬೀಜ ಬಿತ್ತುವುದು, ಸಸಿ ಬೆಳೆಸುವುದು, ಗೊಬ್ಬರ ಹಾಕುವುದು. ಧಾನ್ಯಗಳನ್ನು ಸಂಗ್ರಹಿಸಿ ರಾಶಿ ಮಾಡುವುದು ಮತ್ತು ನಾಟಿ ಮಾಡುವುದು ಹಲವಾರು ಕೆಲಸಗಳನ್ನು ಮಾಡುತ್ತಿದ್ದರು.

ಉದಾಹರಣೆಗೆ ಮೊಚ್ಚೊಬ್ಬರಸಿ ಕುಂಬಾಳೆಯ ಮುಖ್ಯಸ್ಥನಿಂದ ಉಳುಮೆಗೆ ಒಳಪಡದ ಭೂಮಿಯನ್ನು ಸ್ವೀಕರಿಸಿ, ಅದನ್ನು ಫಲವತ್ತಾಗಿ ಮಾಡಿ, ಮನೆಯನ್ನು ಕಟ್ಟಿ ತೋಟವನ್ನು ಬೆಳೆಸಿದಳೆಂದು ತಾಳಂಗೇರಿಯ ಶಾಸನವು ತಿಳಿಸುತ್ತದೆ. ಅದೇ ರೀತಿಯಾಗಿ ರಾಣಿ ಎರಡನೇ ಅಬ್ಬಕ್ಕ ತನ್ನ ಭೂಮಿಯ ಮೇಲ್ವಿಚಾರಣೆಯನ್ನು ತಾನೆ ಮಾಡುತ್ತಿದ್ದಳು ಎಂದು ತಿಳಿದು ಬರುತ್ತದೆ. ಸ್ತ್ರೀಯರು ಕೃಷಿ ಕಾರ್ಮಿಕರಾಗಿಯೂ ಕೆಲಸ ಮಾಡುತ್ತಿದ್ದರು ಎಂಬ ವಿಷಯವು ಶಾಸನಗಳಿಂದ ತಿಳಿದುಬರುತ್ತದೆ.[೧೧]

**ಗಾಣಿಗರು :** ಗ್ರಾಮ ಮತ್ತು ಪಟ್ಟಣಗಳಲ್ಲಿ, ಗಾಣಗಳ ಮುಖಾಂತರ ಎಣ್ಣೆ ಉತ್ಪಾದನೆ ಮಾಡುವವರನ್ನು ಗಾಣಿಗರೆಂದು ಕರೆಯಲಾಗುತ್ತಿತ್ತು. ನಿತ್ಯೋಪಯೋಗಿಯಾದ ಎಣ್ಣೆಯ ಬೇಡಿಕೆ ಸಮಾಜದಲ್ಲಿ

ಅಧಿಕವಿದ್ದುದ್ದರಿಂದ ಪ್ರತಿಯೊಂದು ಊರುಗಳಲ್ಲಿಯೂ ಗಾಣಗಳಿದ್ದವೆಂದು ಹೇಳಬಹುದು. ದೇವದುರ್ಗದ ಗಬ್ಬೂರಿನ ಕ್ರಿ.ಶ.೧೧೫೪ರ ಶಾಸನದಲ್ಲಿ ಗಾಣದ ಕಾಸಿಸೆಟ್ಟಿಯು ಕೇಶವ ದೇವರಿಗೆ ಕಾಣಿಕೆಗಳನ್ನು ನೀಡಿದ ಬಗ್ಗೆ ಉಲ್ಲೇಖವಿದೆ. ಮಾನ್ವಿಯ ಕವಿತಾಳದ ಶಾಸನವು ಕ್ರಿ.ಶ.೧೨೧೭ರಲ್ಲಿ ತೆಲ್ಲಿಗರು ಹಲ್ಲೇಶ್ವರ ದೇವರಿಗೆ ಕಾಣಿಕೆಯ ನೀಡಿದ ವಿಷಯವನ್ನು ಉಲ್ಲೇಖಿಸುತ್ತದೆ.

**ಕುಂಬಾರರು :** ಮಣ್ಣಿನ ಮಡಿಕೆಗಳನ್ನು ಮಾಡುವುದರಿಂದ ಇವರನ್ನು ಕುಂಬಾರರು ಎಂದು ಕರೆಯಲಾಗುತ್ತದೆ. ಇವರು ಜಿಲ್ಲೆಯ ಎಲ್ಲ ಕಡೆಗೂ ವಾಸಿಸುತ್ತಾರೆ. ಲಿಂಗಸೂಗೂರಿನ ನವಿಲೆಯ ಶಾಸನವು ಕುಂಬಾರ ರಾಚಿಉಯ್ಯನ ಕುರಿತು ಉಲ್ಲೇಖಿಸುತ್ತದೆ.

**ಮಾಲಗಾರರು :** ತೋಟಗಳಲ್ಲಿ ಹೂವಿನ ಗಿಡಗಳನ್ನು ಬೆಳಸಿ ಹೂಗಳನ್ನು ಮಾಲೆ ಮಾಡಿ ಸಂತೆ ಪೇಟೆಗಳಲ್ಲಿ ಹೋಗಿ ಮಾರಾಟ ಮಾಡುವವರು ಮಾಲೆಗಾರರಾಗಿರುತ್ತಾರೆ. ದೇವದುರ್ಗದ ಗಬ್ಬೂರು ಕ್ರಿ.ಶ.೧೧೪೪ರ ಶಾಸನವು ಮಾಲಗಾರರು ಬಾಡುಕಾಯಿ ಮಾರಿಯಲ್ಲಿ ಬಂದ ಲಾಭದಲ್ಲಿ ಅರವಾನ ಭತ್ತ ನೀಡಬೇಕೆಂದಿದೆ. ಇವರನ್ನು ಮಾಲಗಾರ ಅರವತ್ತೊಕ್ಕಲು ಎಂದು ಶಾಸನ ಉಲ್ಲೇಖಿಸಿದೆ. ದೇವದುರ್ಗವ ಚಂದನಕೇರಿಯ ಕ್ರಿ.ಶ.೧೨ನೇ ಶತಮಾನದ ಶಾಸನವು ಮಾಲಗಾರರು ಮಲ್ಲಿಕಾರ್ಜುನ ದೇವರಿಗೆ ದಾನ ನೀಡಿದಂತೆ ತಿಳಿಸುತ್ತದೆ. ದೇವದುರ್ಗದಲ್ಲಿ ದೊರೆತ ಮತ್ತೊಂದು ಶಾಸನವು ಕೇಶವ ದೇವರಿಗೆ ಮಾಲೆಗಾರರು ದೇವರ ಹೂದೋಟಕ್ಕೆ ದಾನ ನೀಡಿದ ಮಾಹಿತಿ ಇದೆ. ಗಬ್ಬೂರಿನಲ್ಲಿ ೧೧೫೪ರ ಶಾಸನವು ಚಾಮಿಕವ್ವೆಯ ಕೆಸವನು ಮಾಲೆಗಾರ ಮಲ್ಲಯನ ಮಗ ಸೇವಣನ ಕೈಯಲ್ಲಿ ಹೂದೋಟವನ್ನು ಕೊಂಡು ತ್ರಿಪುರಾಂತಕರ ದೇವರಿಗೆ ಮತ್ತು ಶ್ರೀ ಕೇಶವದೇವರಿಗೆ ಬಿಟ್ಟುಕೊಟ್ಟ ವಿಷಯ ತಿಳಿಸುತ್ತದೆ.[೨]

**ಕಮ್ಮಾರರು :** ಅಕ್ಕಸಾಲಿಗರು ಎಂದು ಕೂಡ ಇವರನ್ನು ಕರೆಯುತ್ತಾರೆ. ಇವರು ಚಿನ್ನದ ಕೆಲಸವನ್ನು ಮಾಡುತ್ತಾರೆ. ಹಾಗೂ ಇವರು ಪ್ರಾಚೀನ ಕಾಲದಲ್ಲಿ ನಾಣ್ಯಗಳನ್ನು ತಯಾರಿಸುತ್ತಿದ್ದರು. ರಾಜನು ತನ್ನ ಕಮ್ಮಗಳ ಮೇಲ್ವಿಚಾರಣೆಗೆ ಅಧಿಕಾರಿಗಳನ್ನು ನೇಮಿಸುತ್ತಿದ್ದನು. ದೇವದುರ್ಗದ ಗಬ್ಬೂರಿನಲ್ಲಿ ದೊರೆತ ಶಾಸನವು ಕಮ್ಮಟಕಾರರು ಊರಲ್ಲಿಯ ಬ್ರಹ್ಮಜಿನಾಲಯಕ್ಕೇ ತಾವು ಮಾರಿದ ವಸ್ತುಗಳ ಮೇಲಿನ ತೆರಿಗೆಯನ್ನು ದಾನ ಬಿಟ್ಟ ವಿಷಯವನ್ನು ತಿಳಿಸುತ್ತದೆ.

**ಜೇಡರು :** ಬಟ್ಟೆಗಳನ್ನು ನೇಯುವವರನ್ನು ಜೇಡರು ಎಂದು ಕರೆಯುತ್ತಾರೆ. ಇವರನ್ನು ನೇಕಾರರು ಎಂದು ದೇವದುರ್ಗದ ಚಂದನ ಕೆರೆ ಶಾಸನವು ಕ್ರಿ.ಶ.೧೨ನೇ ಶತಮಾನದ ಜೇಡರೊಕ್ಕಲರು ಮಲ್ಲಿಕಾರ್ಜುನ ದೇವರಿಗೆ ತಾವು ಮಾರಿದ ಭತ್ತದಲ್ಲಿ ಬಂದ ಲಾಭದ ಕೆಲ ಭಾಗವನ್ನು ದಾನ ಬಿಟ್ಟ ವಿವರ ನೀಡಿದ. ಲಿಂಗಸೂಗೂರಿನಲ್ಲಿ ದೊರೆತ ಕ್ರಿ.ಶ.೧೧೨೭ರ ಶಾಸನವು ಈಶ್ವರ ಗುಡಿಯ ಅಂಗಭೋಗ, ರಂಗಭೋಕ್ಕೆಂದು ಕೆಲವು ತೆರಿಗೆಗಳ ದಾನಬಿಟ್ಟ ವಿಷಯವನ್ನು ಉಲ್ಲೇಖಿಸುತ್ತದೆ.

**ಬಡಗಿಗಳು :** ಮರದ ಕೆಲಸಗಳನ್ನು ಮಾಡುವವರೆ ಬಡಿಗರು ಇವರ ವಿಶ್ವಕರ್ಮ ಕುಲಕ್ಕೇ ಸೇರಿದವರು. ಕ್ರಿ.ಶ.೧೭೬೦ರ ಸಿರವಾರ ಶಾಸನ ಬಡಗಿಭೀಮರಾಯನಿಗೆ ಕಲ್ಲೂರು ಗ್ರಾಮದ ನಾಡಗೌಡ, ಗೌಡಸೆಟ್ಟಿ ಮೊದಲಾದವರು ಬಿಡರಾವನ್ನು ದಿನಾಯಿತಿಯಾಗಿ ನೀಡಿದ ವಿಷಯವನ್ನು ಉಲ್ಲೇಖಿಸುತ್ತದೆ.[೧೪]

**ಗೊರವರು :** 'ಗುರು' ಶೈವಭಿಕ್ಷು ತಪಸ್ವಿ 'ಸನ್ಯಾಸಿ' ಎಂದು ಶಿವರಾವಕಾರಂತರು ಗೊರವರನ್ನು ಕುರಿತು ಅರ್ಥಕೋಶದಲ್ಲಿ ವಿವರಿಸಿದ್ದಾರೆ ಮಾನ್ವಿಯ ಕ್ರಿ.ಶ.೧೧ನೇ ಶತಮಾನದ ಶಾಸನವು ದೇವಾಲಯದ ಯತಿಯಾದ ಪಟ್ಟಮಣಿಸಿವ ಗೊರವರಿಗೆ ಪುಲಿಯಮ್ಮ ಎಂಬುವವಳು ತೋಟವನ್ನು ದಾನವಾಗಿ ಬಿಟ್ಟ ವಿಷಯವನ್ನು ತಿಳಿಸುತ್ತದೆ. ಲಿಂಗಸೂಗೂರಿನ ಕ್ರಿ.ಶ.೧೨ನೇ ಶತಮಾನದ ಶಾಸನವು ಬಸಯ್ಯನೆಂಬುವವನು ಗೊರವರಿಗೆ ದಾನ ಬಿಟ್ಟ ವಿಷಯವನ್ನು ಉಲ್ಲೇಖಿಸುತ್ತದೆ.

**ಬೇಡರು :** ಇವರನ್ನು ನಾಯಕ, ವಾಲ್ಮೀಕಿ, ತಳವಾರ, ಪಾಳೆಗಾರ ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. ವಾಲ್ಮೀಕಿಯು ಬೇಡನಾಗಿದ್ದ ಎಂಬ ನಂಬಿಕೆಯಿಂದ ಇವರು ವಾಲ್ಮೀಕಿ ಮತಕ್ಕೆ ಸೇರಿರುವುದಾಗಿ ಹೇಳಿಕೊಳ್ಳುತ್ತಾರೆ. ಅರಸೊತ್ತಿಗೆ ಕಾಲದಲ್ಲಿ ಇವರು ಸೈನಿಕರಾಗಿದ್ದರು. ಮತ್ತು ಅನೇಕ ಸಂಸ್ಥಾನಗಳಲ್ಲಿ ಪಾಳೆಗಾರರಾಗಿಯೂ ಇದ್ದರು. ಇವರಲ್ಲಿ ಊರಬೇಡರು ಮತ್ತು ಮ್ಯಾಸಬೇಡರು ಎಂಬ ಒಳವಿಭಾಗಗಳಿವೆ.

**ಕುರುಬರು :** ಇವರು ಸಾಂಪ್ರಾದಾಯಿಕವಾಗಿ ಕುರಿ ಸಾಕುವವರು ಮತ್ತು ಕಂಬಳಿ ನೇಯುವವರು. ಹಲವರು ಕೃಷಿಯಲ್ಲಿ ತೊಡಗಿದ್ದಾರೆ. ಹಾಲು ಕುರುಬರು ಮತ್ತು ಕಂಬಳಿ ಕುರುಬರು ಎಂಬ ಮೂರು ಪಂಗಡಗಳಿವೆ. ಇವರು ಗಿಡ, ಮರ, ಪ್ರಾಣಿಗಳ ಕಂಬಳಿಗಳ ಕುಲಲಾಂಛನ ಹೊಂದಿರುತ್ತಾರೆ. ಕುರುಬರಲ್ಲಿ ಕೆಲವರು ಶೈವಮತವಲಂಬಿತರಾದರು. ಇವರು ಬೀರ, ಬೀರಪ್ಪ, ಬೀರಲಿಂಗ ಎನ್ನುವ ದೇವರನ್ನು ಪೂಜಿಸುತ್ತಾರೆ. ಈ ದೇವರ ಗೌರವಾರ್ಥಕವಾಗಿ ಡೊಳ್ಳು ಕುಣಿತವನ್ನು ಆಡುತ್ತಾರೆ. ಗಬ್ಬೂರಿನಲ್ಲಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಿತವಾದ ಬೀರಲಿಂಗೇಶ್ವರ ದೇವಾಲವಿದೆ. ಈ ದೇವಾಲಯದಲ್ಲಿ ಬೀರಪ್ಪ ದೇವರು ಅನೇಕ ಕುರಿ, ಮೇಕಗಳ ಜೊತೆಗೆ ಇದ್ದಾರೆ. ಹಾಗೂ ರಾಮದುರ್ಗದ ಬೆಳೂಣೆ ಸಿದ್ದೇಶ್ವರ ದೇವಾಲಯದ ಪಕ್ಕದಲ್ಲಿ ಕುರುಬನು ವೀರಾವೇಶದಿಂದ ಹೋರಾಡಿ ಮರಣವನ್ನು ಹೊಂದಿದ ಸ್ಮರಣಾರ್ಥಕವಾಗಿ ವೀರಗಲ್ಲನ್ನು ಹಾಕಿಸಿದ್ದಾನೆ. ವೀರನು ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಬರ್ಚಿ ಸೊಂಟದಲ್ಲಿ ಸಣ್ಣ ಕತ್ತಿ ಅನೇಕ ವಸ್ತ್ರಾಭರಣಗಳು ಎಡಭಾಗದಲ್ಲಿ ಕುರಿ, ಮೇಕೆಯ ಚಿತ್ರಗಳನ್ನು ಕಾಣಬಹುದು. ಎರಡನೇಯ ವೀರಗಲ್ಲಿನಲ್ಲಿ ವೀರನು ಎರಡು ಕೈಯಲ್ಲಿ ಡಮರುಗಳನ್ನು ಹಿಡಿದಿದ್ದಾನೆ. ಅನೇಕ ಮೇಕೆಗಳು ಇವೆ. ಆತನ ಪಕ್ಕದಲ್ಲಿ ಹೆಂಡತಿ ನಿಂತಿದ್ದಾಳೆ.

**ಬಣಜಿಗರು :** ಇವರನ್ನು ಶೆಟ್ಟರು, ನಾಯ್ಡು, ಬಣಜಿಗ ಇತ್ಯಾದಿ ಹೆಸರುಗಳಿಂದ ಕರಯುತ್ತಾರೆ. ಇವರ ಕಸುಬು ವ್ಯಾಪಾರ, ಇವರಲ್ಲಿ ಪಂಚಮ ಬಣಜಿಗರು, ಶೀಲವಂತ ಬಣಜಿಗರು ಎಂದು ಎರಡು ಪಂಗಡಗಳಿವೆ. ಇವರು ಲಿಂಗಾಯತ ಮತಕ್ಕೆ ಸೇರಿದವರು.

**ಡೊಂಬರು :** ಡೊಂಬರು ಸಂಪ್ರದಾಯಿಕವಾಗಿ ಡೊಂಬರಾಟ ಆಡುವವರು. ಮತ್ತು ಹಾವಾಡಿಗರು ಎಂದು ಕರೆಯುತ್ತಾರೆ. ಇವರು ತಮ್ಮನ್ನು ಡೋಮ, ದೋಮ, ದೊಮ್ಮರ ಎಂದು ಕರೆದುಕೊಳ್ಳುತ್ತಾರೆ. ಇಂದು ಇವರನ್ನು ಉತ್ತರ ಭಾರತದ ಡೋಲು ಕುಲಸಂಜಾತರೆಂದು ಕರೆಯಲಾಗುತ್ತದೆ. ತಮ್ಮ ಸಾಂಪ್ರಾದಾಯಿಕ ಕುಶಲತೆ, ಕಸರತ್ತು ಮುಂತಾದವುಗಳಿಂದ ಇವರು ತಮ್ಮ ಜೀವನವನ್ನು ನಡೆಸುತ್ತಾರೆ. ಈ ಜನಾಂಗದಲ್ಲಿ ಮಹಿಳೆಯರಿಗೆ ಬಹಳ ಪ್ರಾಮುಖ್ಯತೆಯಿರುತ್ತದೆ. ಮಹಿಳೆಯರು ವಿಧ ವಿಧವಾದ ಡೊಂಬಾರಾಟವನ್ನು ಆಡುತ್ತಾರೆ. ಈ ಜನಾಂಗದವರು ಅಲೆಮಾರಿ ಜೀವನವನ್ನು ಸಾಗಿಸುತ್ತಾರೆ.

**ಗೊಲ್ಲರು :** ಗೋಲ್ಲರನ್ನು ಮದನಗೊಲ್ಲರು ಗೋಪಾಲ ಎಂಬ ಅನೇಕ ಹೆಸರುಗಳಿಂದ ಕರೆಯುತ್ತಾರೆ. ಸಾಂಪ್ರಾದಾಯಿಕವಾಗಿ ಗೋವುಗಳನ್ನು ಕಾಯುವವರು ಮತ್ತು ಹೈನುಗಾರಿಕೆ ಮಾಡುವುದು ಇವರ ವೃತ್ತಿಯಾಗಿದೆ. ಸ್ತ್ರೀಯರು ಮನೆಯಲ್ಲಿಯೇ ಹಾಲು ಮಾರುವುದು, ಮೊಸರು, ತುಪ್ಪ ಮಾರುವುದು ಮತ್ತು ಗೋವುಗಳ ಹೆಂಡೆಕಸವನ್ನು ಬಳೆಯುವುದು ಇನ್ನು ಮುಂತಾದ ಕೆಲಸಗಳನ್ನು ಮಾಡುತ್ತಾರೆ.

**ಒಡ್ಡರು :** ಈ ಜನರನ್ನು ಬೋವಿಗಳೆಂದು ಕರೆಯುತ್ತಾರೆ. ಇವರಲ್ಲಿ ಕಲ್ಲು ಒಡ್ಡರು, ಮಣ್ಣು ಒಡ್ಡರು ಮತ್ತು ಉಪ್ಪು ಒಡ್ಡರು ಎಂಬ ಮೂರು ಪಂಗಡಗಳಿವೆ. ಇದವರ ಬಂಡೆಗಳನ್ನು ಸೀಳುವುದು ಕಲ್ಲನ್ನು ಒಡೆಯುವುದು, ಬಾವಿ ತೋಡುವುದು ಮುಂತಾದ ಕೆಲಸಗಳನ್ನು ಮಾಡುತ್ತಾರೆ. ಈ ಎಲ್ಲದರಲ್ಲಿಯೂ ಮಹಿಳೆಯರು ಕೆಲಸ ಮಾಡುತ್ತಾರೆ.

**ಕೊರವರು :** ಕೊರವರನ್ನು ಕೊರಮಶೆಟ್ಟಿ, ಕಂಚಿಕೊರವ, ಕೊಂಚ ಎಂದೆಲ್ಲ ಹೆಸರುಗಳಿಂದ ಕರೆಯುತ್ತಾರೆ. ಇವರು ಅನೇಕ ಜಿಲ್ಲೆಯ ಹಾಗೂ ಗ್ರಾಮಗಳಲ್ಲಿಯೂ ವಾಸ ಮಾಡುತ್ತಾರೆ. ಇವರ ಉದ್ಯೋಗವೆಂದರೆ ಬಿದಿರಿನಿಂದ ಬುಟ್ಟಿ, ಬಾರಿಗೆ, ಚಾಪೆ ಮುಂತಾದವುಗಳನ್ನು ಮಾಡಿ ಮಾರಾಟ ಮಾಡುವುದು, ಇವರ ವೃತ್ತಿಯಾಗಿದೆ.[೧೪]

ದೇಶದ ಪ್ರತಿಯೊಂದು ಗ್ರಾಮಗಳು ಒಂದಕ್ಕಿಂತ ಇನ್ನೊಂದು ಭಿನ್ನವಾಗಿವೆ. ಸಮುದ್ರ ತೀರದಲ್ಲಿರುವ ಮಹಿಳೆಯರು ಮೀನುಗಾರಿಕೆಯೇ ಅವರ ಮುಖ್ಯ ವೃತ್ತಿಯಾಗಿದ್ದರೆ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಬತ್ತದ ಬೇಸಾಯ, ತೆಂಗು ಅಡಿಕೆ ತೋಟಗಳಲ್ಲಿನ ದುಡಿತ ಮುಖ್ಯವೃತ್ತಿ. ಕೇರಳದಲ್ಲಿ ತೆಂಗು ಹಾಗೂ ಅದಕ್ಕೆ ಸಂಬಂಧಪಟ್ಟ ಕೆಲಸ ಕಾರ್ಯಗಳು ಮುಖ್ಯ ವೃತ್ತಿಯಾಗಿದ್ದರೆ, ಕೊಡಗಿನಲ್ಲಿ ಕಾಫಿ, ಕಿತ್ತಳೆ ತೋಟಗಳ ಕೆಲಸ ಪ್ರಮುಖವಾಗಿದೆ. ಉತ್ತರ ಕರ್ನಾಟಕದ ಬಯಲು ಸೀಮೆಯಲ್ಲಿ ಜೋಳ, ಗೋಧಿ, ಇತ್ಯಾದಿ ಬೇಸಾಯದ ವೃತ್ತಿಯಿದ್ದಂತೆ, ಉತ್ತರ ಭಾರತದಲ್ಲಿ ಆಯಾ ಹವಾಮಾನಕ್ಕನುಸಾರವಾಗಿ ಅಲ್ಲಲ್ಲಿ ಬೆಳೆಯುವ ಮುಖ್ಯ ವ್ಯಾಪಾರೀ ಬೆಳೆಗಳನ್ನು ಅವಲಂಬಿಸಿಕೊಂಡು ಮಹಿಳೆಯರ ಬದುಕು, ಅವರ ದುಡಿತವೂ ರೂಪಗೊಂಡಿವೆ. ಸಮಗ್ರ ದೇಶದಲ್ಲಿ ಎಲ್ಲ ಗ್ರಾಮಗಳ ಮಹಿಳೆಯರ ಜೀವನಕ್ರಮ ಅವರ

ಪರಿಸರ ಒಂದೇ ತೆರನಾಗದಿರಲು ಅವರು ಹೊಂದಿಕೊಂಡ ಹವಾಮಾನದ ಬೆಳೆಗಳು, ಆರ್ಥಿಕ ಪರಿಸ್ಥಿತಿಗಳು, ಅಲ್ಲಿಯ ವಾತಾವರಣವೂ ಕಾರಣ ವೇಷಭೂಷಣಗಳಲ್ಲಿ, ನಡೆನುಡಿಗಳಲ್ಲಿ ಆಹಾರ ಪಾನೀಯಗಳಲ್ಲಿ ಜನ ಸಂಖ್ಯೆಯಲ್ಲಿ ಜೀವನ ಕ್ರಮಗಳಲ್ಲಿ, ದೇವರು, ಆಚಾರ ವಿಚಾರ, ಜಾತಿಧರ್ಮ ಸಂಸ್ಕೃತಿಗಳಲ್ಲಿ ಬಹಳಷ್ಟು ವ್ಯತ್ಯಾಸಗಳಿವೆ.

ಶಾಸನಗಳು ವೃತ್ತಿಕಾರರ ಬಗ್ಗೆ ಪ್ರತ್ಯೇಕವಾದ ಉಲ್ಲೇಖಗಳನ್ನು ಕೊಡುವುದಿಲ್ಲ. ಹಿಂದಿನ ಕಾಲದಲ್ಲಿ ರಾಣಿಯರು, ರಾಜರು, ಸಾಮಾಂತಾಧಿಕಾರಿಗಳು, ಮಾಂಡಳೀಕರು, ಪ್ರಭುಗಾವುಂಡರು ಮಾತ್ರ ಶಾಸನಗಳನ್ನು ಹಾಕಿಸುತ್ತಿದ್ದರು. ವೃತ್ತಿಕಾರರು ತಮ್ಮ ಜೀವನೋಪಾಯಕ್ಕಾಗಿಯೇ ದುಡಿಯುತ್ತಿದ್ದರು. ಅವರಿಗೆ ತಾವು ದುಡಿದು ಸಂಪಾದಿಸಿದ ಹಣವು ಅವರ ದೈನಂದಿನ ಜೀವನಕ್ಕೆ ಸಾಲುವಂತಿತ್ತು. ಅಂತಹ ಸಮಯದಲ್ಲಿ ವೃತ್ತಿಕಾರರಿಗೆ ದೇವಾಲಯ, ಅಗ್ರಹಾರ, ಕೆರೆ-ಬಾವಿ ತೋಡಿಸುವಂತಹ ಯೋಗ್ಯತೆ ಇರಲಿಲ್ಲವೆಂದು ತಿಳಿಯಬಹುದು. ಮತ್ತು ಈ ವೃತ್ತಿಕಾರರು ಒಂದೇ ಕಡೆ ನೆಲೆ ನಿಂತುಕೊಳ್ಳುವವರಲ್ಲಿ ಇವರು ಅಲೆಮಾರಿ ಜನಾಂಗದವರಾಗಿದ್ದರು. ಅದೇ ರೀತಿಯಾಗಿ ಮಹಿಳೆಯರು ಕೂಡ ಯಾವುದೇ ರೀತಯಲ್ಲಿ ದಾನ-ದತ್ತಿಗಳನ್ನು ಕೊಟ್ಟ ವಿಷಯ ಪ್ರಸ್ತಾಪವಾಗಿಲ್ಲ. ಆದ್ದರಿಂದ ಇವರನ್ನು ಕುರಿತು ಯಾವುದೇ ಶಾಸನವು ಉಲ್ಲೇಖಿಸುವುದಿಲ್ಲ. ಯಾರೋ ಒಬ್ಬಿಬ್ಬರು ವೃತ್ತಿಕಾರರು ಮಾತ್ರ ಕೆಲ ಶಾಸನಗಳಲ್ಲಿ ದಾನಕೊಟ್ಟ ವಿಷಯವನ್ನು ಉಲ್ಲೇಖಿಸುತ್ತವೆ.[೧೫]

ಹೀಗೆ ಮಹಿಳೆಯರು ಹಲವಾರು ವಿಧದಲ್ಲಿ ರಕ್ಷಕಿ, ನೃತ್ಯಾಗಾರ್ತಿ, ದೇವಾಲಯದ ಸೇವಕಿ, ಮನೆಕೆಲಸದವಳಾಗಿ, ಕಲಾವಿದೆಯಾಗಿ, ಕೈಗಾರಿಕೆ ಮತ್ತು ಕೃಷಿ ಉದ್ಯೋಗಸ್ಥಳಾಗಿ ಹೀಗೆ ಪ್ರತಿಯೊಂದು ಕೆಲಸ ಕಾರ್ಯಗಳಲ್ಲಿ ಯಶಸ್ವಿಯನ್ನು ಪಡೆದಿದ್ದಾಳೆ.

## ೩.೨. ಗ್ರಾಮೀಣ ಮಹಿಳೆ

ಭಾರತ ದೇಶವನ್ನು ಹಳ್ಳಿಗಳಿಂದ ಕೂಡಿದ ದೇಶ ಎಂದು ಕರೆಯುತ್ತಾರೆ. ಈ 'ಜಗತ್ತು ಅಥವಾ ಪ್ರಪಂಚ ಎನ್ನುವ ಪದವೇ ಪಂಚಭೂತಗಳಾದ ನೀರು, ಗಾಳಿ, ಬೆಳಕು, ಭೂಮಿ, ಆಕಾಶಗಳಿಂದ ಆವರಿಸಲ್ಪಟ್ಟಿದೆ. ಇಂತಹ ಪ್ರಾಕೃತ ಸಂಪತ್ತನ್ನು ಅನುಭವಿಸಲು ಲಕ್ಷಾಂತರ ಜೀವಿಗಳು ಸೃಷ್ಟಿಯಾಗಿವೆ. ಅವುಗಳೇ ಜೀವಜಂತುಗಳು, ಸಸ್ತನಿಗಳು, ಮೃತ-ಪಕ್ಷಿಗಳು, ನರ-ವಾನರರೆಂದು ಕರೆಯುವುದು. ಒಂದೊಂದು ಜೀವಿಯೂ ಒಂದೊಂದು ತೆರನಾದ ವಾಸ್ತವವನ್ನು ಕಂಡುಕೊಳ್ಳುತ್ತದೆ. ಮೀನು ನೀರಿನಲ್ಲಿ ಹಕ್ಕಿ-ಪಕ್ಷಿಗಳು ತಾವೇ ರಚಿಸಿಕೊಂಡ ಗೂಡಿನಲ್ಲಿಯೂ, ಕೀಟಾದಿಗಳೂ ಅವುಗಳ ಸಾಮರ್ಥ್ಯಕ್ಕನುಗುಣವಾದ ಸಸ್ಯ ಸಂಪತ್ತನ್ನಾಶ್ರಯಿಸಿ ಜೀವಿಸುವುದು ಋತು ಚಕ್ರಕ್ಕನುಗುಣವಾಗಿ ನಡೆದೆ ಇದೆ. ಹೀಗಿರುವಾಗ ಬುದ್ಧಿ ಪ್ರಾಧಾನತೆ ಇರುವ ಮಾನವನ ಬದುಕು ಬಹು ಎತ್ತರದಲ್ಲಿ ನಿಲ್ಲುತ್ತದೆ. ಆ ಬದುಕಿಗೆ ಬಹು

ವಿಸ್ತಾರವಾದ ಸಂಸ್ಕೃತಿ, ಚರಿತ್ರೆ, ಪರಂಪರೆಗಳೂ ಜೀವನದುದ್ದಕ್ಕೂ ಪ್ರವಹಿಸುವ ನದಿಯಂತೆ ಹರಿದು ಬರುತ್ತಲೇ ಇರುತ್ತದೆ. ಈ ಹಿನ್ನೆಲೆಯನ್ನು ನೋಡಿದಾಗ ಮೂಲತಃ ಅಲೆಮಾರಿಯಾಗಿದ್ದ ಮಾನವ ಕೃಷಿ ಕಲೆಯನ್ನು ಕಲಿತು ಒಂದು ನಿರ್ದಿಷ್ಟ ಭೂಪ್ರದೇಶದಲ್ಲಿ ವಾಸಿಸಲು ತೊಡಗಿದಾಗಿನಿಂದ ಅವನ ಸಾಮಾಜಿಕ ಇತಿಹಾಸ ಆರಂಭವಾಯಿತು. ಹೀಗೆ ಭೂಮಿಯನ್ನು ಅವಲಂಬಿಸಿ ಒಂದೆಡೆ ನೆಲೆ ನಿಂತು ಬದುಕು ಪ್ರಾರಂಭಿಸುವಾಗಲೇ ಗ್ರಾಮಗಳ ಉದಯವಾಯಿತೆಂದರೆ ತಪ್ಪಾಗಲಾರದು.[೧೬]

ಗ್ರಾಮೀಣ ಪ್ರದೇಶದ ಎಲ್ಲ ಸಾಮಾಜಿಕ ಆಯಾಮಗಳ ಮೂಲ ಪುರುಷನ ಕೈಯಲ್ಲಿದೆ. ಆ ಸಮುದಾಯದಲ್ಲಿ ವೈಯಕ್ತಿಕ ಎನಿಸುವ ಸಂಪತ್ತು ಮತ್ತು ದೈನಂದಿನ ಚಟುವಟಿಕೆಗಳನ್ನು ನಿರ್ಧರಿಸುವ ಶಕ್ತಿ ಕೂಡ ಆತನಲ್ಲೆ ಕೇಂದ್ರಿಕೃತವಾಗಿರುತ್ತದೆ. ಹೀಗಾಗಿ ಇಲ್ಲಿ ಮಹಿಳೆಗೆ ಸ್ವತಂತ್ರವಾಗಿ ಚಲಿಸುವ ಸಾಮರ್ಥ್ಯ ಕ್ಷೀಣಿಸುತ್ತದೆ. ಭೂಮಿ ಆಧಾರಿತವಾದ ಜೀವನ ವಿಧಾನದಲ್ಲಿ ಮಹಿಳೆಯ ಸ್ಥಾನ ಕೇವಲ ಸಾಂಸ್ಕೃತಿಕ ಆಚರಣೆಗಳಲ್ಲಿ ಮಾತ್ರ ಎದ್ದು ಕಾಣುತ್ತದೆ. ಹಾಗಾಗಿ ನಗರ ಪ್ರದೇಶದ ಮಹಿಳೆಗಿಂತ ಗ್ರಾಮೀಣ ಮಹಿಳೆಗೆ ಆಚರಣೆಗಳು ಮತ್ತು ಸಂಪ್ರಾದಾಯಿಕ ವಿಧಿ-ವಿಧಾನಗಳಲ್ಲಿ ಹೆಚ್ಚಿನ ಪ್ರವೇಶವಿರುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾಗಿರುವುದು, ಚಲನಶೀಲ ಆರ್ಥಿಕ ವ್ಯವಸ್ಥೆ ಇರುವ ಗ್ರಾಮೀಣ ಪ್ರದೇಶದಲ್ಲಿ ಮಹಿಳೆ ತನ್ನನ್ನು ಯಾವ ಮಾನದಂಡಗಳ ಮೂಲಕ ಗುರುತಿಸಿಕೊಳ್ಳುತ್ತಿದ್ದಾಳೆ. ಶೇಕಡ ೯೦ಕ್ಕಿಂತ ಹೆಚ್ಚಿನ ಗ್ರಾಮೀಣ ಮಹಿಳೆಯರು ಪ್ರತಿನಿತ್ಯದ ದುಡಿಮೆಯ ಮೂಲಕ ತಮ್ಮ ಅನ್ನ ಸಂಪಾದಿಸುತ್ತಾರೆ. ಭೂಮಿಯಲ್ಲಿ ಪುರುಷನಿಗೆ ಸಮಾನವಾಗಿ ದುಡಿಯುತ್ತಾರೆ. ನಾಟಿ, ಕಳೆಕೀಳುವುದು, ಒಕ್ಕಣೆ ಮುಂತಾದ ಕೃಷಿಯ ಸೃಜನಶೀಲ ದುಡಿಮೆಗಳು ಆಕೆಯಲ್ಲಿ ಉತ್ಸಾಹ ಮೂಡಿಸುತ್ತವೆ. ಆದರೆ ಇದು ಸ್ಥಿರವಾಗಿರುವುದಿಲ್ಲ. ಗ್ರಾಮೀಣ ಆರ್ಥಿಕ ವ್ಯವಸ್ಥೆ ಮಹಿಳೆ ಮತ್ತು ಮಾರುಕಟ್ಟೆಯ ಏರಿಳಿತಕ್ಕೆ ಅನುಗುಣವಾಗಿ ಚಲಿಸುವುದರಿಂದ, ಆಕೆಯ ನಿರೀಕ್ಷೆಗಳು ಕೂಡ ಈ ವಿದ್ಯಾಮಾನವನ್ನೇ ಅವಲಂಬಿಸುತ್ತವೆ.[೧೭]

ಗ್ರಾಮೀಣ ಜನರಿಗೆ ಭೂಮಿಯೊಂದೇ ಬದುಕಿನ ಅವಲಂಬನೆಯಾಗಿ ಉಳಿದಿಲ್ಲ. ದನ, ಕುರಿ, ಕೋಳಿ, ಆಡು, ಮೇಕೆ, ಸಾಕಾಣಿಕೆಯೂ ಅವರ ಆರ್ಥಿಕ ವಲಯದಲ್ಲಿ ಪ್ರಮುಖ ಸ್ಥಾನವನ್ನು ವಹಿಸುತ್ತವೆ. ಭೂಮಿಯಲ್ಲಿ ಪುರುಷನಿಗೆ ಸಮಾನವಾಗಿ ದುಡಿಯುವ ಮಹಿಳೆ, ಈ ಸಾಕಾಣಿಕೆ ಸಂದರ್ಭದಲ್ಲಿ ಪುರುಷನಿಗಿಂತ ಹೆಚ್ಚು ತೊಡಗಿಸಿಕೊಳ್ಳುತ್ತಾಳೆ. ಕೊಟ್ಟಿಗೆಯ ಕೆಲಸದಿಂದ ಹಿಡಿದು ಪೂರ್ಣ ಜವಾಬ್ದಾರಿ ಅವಳದೇ ಆಗಿರುತ್ತದೆ. ಮನೆಯಲ್ಲಿನ ಹಣಕಾಸಿನ ವಿಷಯವನ್ನು ಬಿಟ್ಟರೆ ಪ್ರತಿಯೊಂದು ದುಡಿಮೆ ಸಂಪೂರ್ಣವಾಗಿ ಮಹಿಳೆಯದೇ ಆಗಿರುತ್ತದೆ. ಈ ಅವಿದ್ಯಾವಂತ ಮಹಿಳೆ ಈ ದುಡಿಮೆಯನ್ನು ಎಷ್ಟು ಚೊಕ್ಕವಾಗಿ ಮಾಡುತ್ತಾಳೆಂದರೆ, ಅದನ್ನು ಕಂಡು ಪುರುಷನಾಚಿ ನೀರಾಗಬೇಕು. ಗ್ರಾಮೀಣ ಪ್ರದೇಶದ ಜನರ ಶೋಷಣೆಯಲ್ಲಿ ತಂತ್ರಗಾರಿಕೆ ಇಲ್ಲ. ಅಥವಾ ಇದ್ದರೂ ಅದು ಪ್ರಮುಖವಾಗಿ ಗಮನ ಸೆಳೆಯುವುದಿಲ್ಲ. ನೀನು ಹೀಗೆಯೇ ನಡೆದುಕೊಳ್ಳಬೇಕು ಎಂಬಂಥ ನಿರ್ದೇಶನಗಳು

ನೇರವಾಗಿ ಇರುತ್ತವೆ. ಆದರೆ ಅವುಗಳನ್ನು ಪಾಲಿಸಬೇಕೆನ್ನುವಾಗ ಕೆಲವು ರಿಯಾಯಿತಿಗಳೂ ಇರುತ್ತವೆ. ಮತ್ತು ರಿಯಾಯಿತಿಗಳು ಯಾಕೆ ಅನಿವಾರ್ಯವಾಗುತ್ತವೆ ಅಂದರೆ, ಭೂಮಿಯ ದುಡಿಮೆಗೆ ಮಹಿಳೆ ದೊರೆಯದಿದ್ದರೆ ಪುರುಷನ ಆರ್ಥಿಕ ಮೂಲವೇ ಬತ್ತಿ ಹೋಗುತ್ತದೆ. ನಗರ ಪ್ರದೇಶದ ಪುರುಷನಿಗೆ ಇರುವ ವೈಯಕ್ತಿಕ ಆರ್ಥಿಕ ಮೂಲಗಳು ಗ್ರಾಮೀಣ ಪ್ರದೇಶದಲ್ಲಿ ಅಪರೂಪ. ಬದಲಾದ ಭೂಮಿಯ ಸಂಬಂಧದಲ್ಲಿ ಅದನ್ನು ಇಲ್ಲವೆಂದೂ ತಿಳಿಯಬಹುದು. ಹಾಗಾಗಿ ನಿರ್ಲಕ್ಷಿಸಬೇಕೆನ್ನುವ ಮಹಿಳೆಯನ್ನು ಅವಲಂಬಿಸುವುದು ಇಲ್ಲಿನ ಪುರುಷನಿಗೆ ಅನಿವಾರ್ಯವಾಗಿದೆ. ಆದರೆ ಸಾಂಸ್ಕೃತಿಕ ವಿಧಿ-ವಿಧಾನಗಳನ್ನು ಹೊರತುಪಡಿಸಿದರೆ ಇತರ ಸಾಮಾಜಿಕ ಚಟುವಟಿಕೆಗಳಲ್ಲಿ ಮಹಿಳೆಯ ಪಾತ್ರ ತುಂಬಾ ಕಡಿಮೆ. ಭಾರತದಲ್ಲಿ ಗ್ರಾಮಸಮುದಾಯಕ್ಕೆ ಸುಮಾರು ಎರಡು ಮಿಲೇನಿಯಂ ವರ್ಷಗಳಷ್ಟು ಸಾಹಿತ್ಯದ ಹಿನ್ನಲೆಯಿದೆ ಎಂದು ಹೇಳಲಾಗುತ್ತದೆ. ಆ ಕಾರಣಕ್ಕಾಗಿ ಇದು ಅತೀ ಪ್ರಾಚೀನವಾದದ್ದು. ಭೂ ಅಗೆತದಲ್ಲಿ ದೊರೆತ ಪ್ರಾಚೀನ ಮತ್ತಿತರ ಐತಿಹಾಸಿಕ ದಾಖಲೆಗಳ ಪ್ರಕಾರ ಆರ್ಯರು ಭಾರತಕ್ಕೆ ಬರುವ ಪೂರ್ವದಲ್ಲಿಯೇ ಇಲ್ಲಿ ಪರಿಪೂರ್ಣವಾದ ಗ್ರಾಮಸಮುದಾಯಗಳಿದ್ದವೆಂದು ತಿಳಿದುಬರುತ್ತದೆ.[೧೮]

ಒಟ್ಟಾರೆಯಾಗಿ ಹೇಳಬೇಕೆಂದರೆ ನಮ್ಮ ರಾಯಚೂರು ಜಿಲ್ಲಾ ಶಾಸನ ಸಂಪುಟದಲ್ಲಿ ವಿಶೇಷವಾಗಿ ಗ್ರಾಮೀಣ ಮಹಿಳೆಯರ ಕುರಿತು ಹೆಚ್ಚು ಹೇಳುವುದಿಲ್ಲ. ಆದರೆ ಆ ಕಾಲದಲ್ಲಿ ಗ್ರಾಮೀಣ ಮಹಿಳೆಯರು ಅನೇಕ ತಮ್ಮದೇ ಆದ ರೀತಿಯಲ್ಲಿ ಕೆಲಸ ಕಾರ್ಯಗಳು ಮಾಡಿರುತ್ತಾರೆಂದು ಹೇಳಬಹುದು. ಮತ್ತು ಅದೇ ರೀತಿಯಾಗಿ ಗ್ರಾಮೀಣ ಮಹಿಳೆಯರು ಜಾನಪದ ಸಾಹಿತ್ಯದಲ್ಲಿ ಮಿಂಚಿದ್ದಾರೆ. ಹಾಗೂ ಸಮಾಜಕ್ಕೆ ತಮ್ಮಿಂದಾದ ಸಮಾಜ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆಂದು ಹೇಳಬಹುದು. ಶಾಸನಗಳಲ್ಲಿ ಉನ್ನತವರ್ಗದವರು ಮಾತ್ರ ಉಲ್ಲೇಖಿತರಾಗಿದ್ದಾರೆ. ಗ್ರಾಮೀಣ ಮಹಿಳೆಯರ ಬಗ್ಗೆ ಯಾವುದೇ ರೀತಿಯಲ್ಲಿ ಪ್ರತ್ಯೇಕವಾಗಿ ಉಲ್ಲೇಖಗಳು ಸಿಗುವುದಿಲ್ಲ. ಆದ್ದರಿಂದ ಹಿಂದಿನ ಕಾಲದಲ್ಲಿ ಇವರು ಅಂದರೆ ಗ್ರಾಮೀಣ ಮಹಿಳೆಯರು ಇರಲಿಲ್ಲವೆಂದಲ್ಲ. ಇದ್ದರೂ ಸಹ ಆರ್ಥಿಕ ತೊಂದರೆಗಳಿಂದಾಗಿ ಅವರು ಯಾವುದೇ ರೀತಿಯ ಶಾಸನಗಳಲ್ಲಿ ಉಲ್ಲೇಖೀತಗೊಳ್ಳುವ ಕೆಲಸ ಕಾರ್ಯಗಳು ಮಾಡಿರಲಿಕ್ಕಿಲ್ಲವೆಂದು ತಿಳಿಯಬಹುದು.

## ೩.೩. ಕೆಳವರ್ಗದ ಮಹಿಳೆ

ನಮ್ಮ ನಾಡಿನಲ್ಲಿ ಪ್ರತಿಯೊಂದು ಮನೆಯಲ್ಲಿಯೂ ತಾಯಿಗೆ ಪೂಜ್ಯಸ್ಥಾನವಿದೆ. ವೇದವು "ಮಾತೃದೇವೋ ಭವ" ಎಂದು ಸ್ತ್ರೀಗೆ ಪ್ರಥಮ ಸ್ಥಾನ ಕೊಟ್ಟಿದೆ. ಜಗದ್ಗುರು ಶಂಕರಾಚಾರ್ಯರು "ಕುಪುತ್ರೋಜಾಯೇತ ಕ್ವಚಿದಪಿ ಕುಮಾತಾ ನಭವತಿ" ಎಂದೂ ನಮ್ಮ ಭರತಖಂಡದಲ್ಲಿ ಕೆಟ್ಟ ತಾಯಿ ಹುಟ್ಟುವುದೇ ಇಲ್ಲ ಎಂದು ಹೇಳಿದ್ದಾರೆ. ನಮ್ಮ ಈ ಭಾರತ ಭೂಮಿಯ ಅಡಿಯಿಂದ ಮುಡಿಯವರೆಗೆ

ಎಲ್ಲೆಡೆಯೂ ಹೆಣ್ಣು ವ್ಯಾಪಿಸಿದ್ದಾಳೆ. ಆಕೆಯ ಪಾವನ ಛಾಯೆ ಎಲ್ಲ ಕಡೆಗೆ ಬಿದ್ದಿದೆ. ನಮ್ಮ ಸಮಗ್ರ ಸಂಸ್ಕೃತಿಯಲ್ಲಿ ತಾಯಿ ಬೆರೆತು ಹೋಗಿದ್ದಾಳೆ. ಒಂದೇ ಮಾತಿನಲ್ಲಿ ಹೇಳಬೇಕಾದರೆ ಸ್ತ್ರೀ ನಮ್ಮ ಸಂಸ್ಕೃತಿಯ ಮಾನಬಿಂದುವಾಗಿದ್ದಾಳೆ. ಆದ್ದರಿಂದಲೇ ನಮ್ಮ ಭೂಮಿಯನ್ನು ತಾಯಿ ಎಂದು ಕರೆದರು. ಪ್ರಕೃತಿಯನ್ನು ಮಾತೆ ಎಂದರು. ಹರಿಯುವ ಪುಣ್ಯ ನದಿಗಳನ್ನು ಸ್ತ್ರೀ ಹೆಸರಿನಿಂದಲೇ ಕರೆದರು. ಸಿರಿ ಸಂಪತ್ತು ವಿದ್ಯೆಗಳ ಆದಿ ದೇವತೆಯರನ್ನು ಲಕ್ಷ್ಮಿ ಸರಸ್ವತಿ ಎಂದರು.

ಸಮಾಜದಲ್ಲಿ ಭಿನ್ನವಾಗಿ ಎರಡು ವರ್ಗಗಳನ್ನು ಗುರುತಿಸುತ್ತೇವೆ. ಒಂದು ಮೇಲ್ವರ್ಗ, ಎರಡು ಕೆಳವರ್ಗ, ಪ್ರಾಚೀನ ವೇದಗಳಲ್ಲಿ ಬ್ರಾಹ್ಮಣ, ಕ್ಷತ್ರೀಯ, ವೈಶ್ಯಾ, ಶೂದ್ರರೆಂದು ನಾಲ್ಕು ಪಂಗಡಗಳನ್ನು ವಿಂಗಡಿಸಲಾಗಿತ್ತು. ಶಿರದಿಂದ ಜನಸಿದವರು ಬ್ರಾಹ್ಮಣರು, ತೋಳ್ ಬಲದಿಂದ ಜನಿಸಿದವರು ಕ್ಷತ್ರೀಯರು, ತೋಡೆಗಳಿಂದ ಜನಿಸಿದವನು ವೇಶ್ಯರು ಮತ್ತು ಪಾದಗಳಿಂದ ಹುಟ್ಟಿದವರು ಶೂದ್ರರು ಎಂದು ಆದಿಯಿಂದಲೂ ವರ್ತಮಾನದವರೆಗೆ ಶೂದ್ರರನ್ನು ತೀರಾ ಕೆಳಮಟ್ಟದಲ್ಲಿ ಕಾಣುತ್ತಾ ಬಂದಿರುವುದನ್ನು ಗಮನಿಸಬಹುದಾಗಿದೆ. ಶೂದ್ರ ವಂಶದಲ್ಲಿ ಹುಟ್ಟಿದವಳೇ ಕೆಳವರ್ಗದ ಮಹಿಳೆ. ಇವಳು ಪುರುಷನಿಗಿಂತ ಹೆಚ್ಚಾಗಿ ಶೋಷಣೆಗೆ ಒಳಗಾಗುತ್ತಾಳೆ. ಈ ಮಹಿಳೆ ಒಂದು ಸಮಾಜದಿಂದ ಮತ್ತು ಎರಡು ಪುರುಷನಿಂದ ಶೋಷಣೆಗೆ ಒಳಗಾಗಿದ್ದಾಳೆ. ಮೇಲ್ವರ್ಗದ ಮಹಿಳೆಗೂ ಕೆಳವರ್ಗದ ಮಹಿಳೆಗೂ ಹೋಲಿಸಿದರೆ, ಆನೆಗೂ ಹಾಗೂ ಇರುವೆಗೂ ಇರುವ ಅಂತರ ಕಂಡುಬರುತ್ತದೆ. ಉನ್ನತ ಸ್ಥಾನ, ಸರ್ವಸೌಲಭ್ಯಗಳನ್ನು ಮೇಲ್ವರ್ಗದ ಮಹಿಳೆ ಹೊಂದಿರುವಳು. ಆದರೆ ಹುಲ್ಲು ಚೋಪಡಿ, ಹರಕಲು ಚಾಪೆ; ಮಡಿಕೆ ಕುಡಿಕೆ. ಅರೆಬೆತ್ತಲೆ ಎಣ್ಣೆಕಾಣದ ಹೆಣ್ಣು ಕೆಳವರ್ಗದವಳಾಗಿದ್ದಾಳೆ. ವೇಷಭೂಷಣಗಳಾಗಲಿ, ಶಿಕ್ಷಣವಾಗಲಿ, ಆರ್ಥಿಕವಾಗಿ, ಧಾರ್ಮಿಕವಾಗಿಯಾಗಲಿ ಮತ್ತು ಸಾಂಸ್ಕೃತಿಕವಾಗಿಯಾಗಲಿ ಈ ಮಹಿಳೆಗೆ ಸೌಲಭ್ಯಗಳು ಸಿಗುವುದಿಲ್ಲ. ಕೆಳವರ್ಗದ ಮಹಿಳೆಯರಲ್ಲಿ ಮುಖ್ಯವಾಗಿ ಧಾರ್ಮಿಕ ಪದ್ಧತಿಗಳಾದ ವೈಶ್ಯಾವಾಟಿಕೆ ಮತ್ತು ದೇವರ ಹೆಸರಿನಲ್ಲಿ ಬಸವಿ ಬಿಡುವ ಪದ್ಧತಿ, ಜೀತ ಪದ್ಧತಿ, ಬಾಲ್ಯ ವಿವಾಹಗಳನ್ನು ಹೆಚ್ಚಾಗಿ ಕಾಣಬಹುದು. ಮೇಲ್ವರ್ಗದಲ್ಲಿರುವ ಗೌಡರು, ನಾಡಗೌಡರು, ಸಾಮಂತರಸರು, ಮುಂತಾದವರು ಕೆಳವರ್ಗದ ಮಹಿಳೆಯರ ಜೊತೆ ಸಂಬಂಧಗಳನ್ನಿಟ್ಟುಕೊಂಡರು. ಆ ವ್ಯಕ್ತಿ ಯಾವುದೇ ಇಂತಹ ತಪ್ಪು ಎಸಗಿದರು ನಮ್ಮ ಸಮಾಜ ಅವನನ್ನು ಮೇಲಸ್ಥಾನದಿಂದಲೇ ಗುರುತಿಸುತ್ತದೆ. ಆದರೆ ಸಮಾಜದಲ್ಲಿ ಈ ವರ್ಗದ ಮಹಿಳೆಯನ್ನು ನೋಡುವ ದೃಷ್ಟಿಕೋನವೇ ಭಿನ್ನವಾಗಿರುತ್ತದೆ. ಹೀಗೆ ನಿರಂತರವಾಗಿ ಪುರುಷ ಪ್ರಧಾನವಾಗಿರುವ ಸಮಾಜದಲ್ಲಿ ಈ ದಲಿತ ಮಹಿಳೆಯರು ಶೋಷಣೆಯನ್ನು ಅನುಭವಿಸುತ್ತಾ ಬಂದಿದ್ದಾರೆ.

ಹಿಂದಿನ ಕಾಲದಿಂದ ಕೆಳವರ್ಗದವರನ್ನು ಊರಿನ ಹೊರಗಡೆಯೇ ಅವರು ಮನೆ ಮಾಡುವ ಹಾಗೆ ಸಮಾಜ ಮಾಡಿದ್ದು ತಿಳಿದೆಯಿದೆ. ದೇವಾಲಯ ಪ್ರವೇಶವಿಲ್ಲ, ಊರಿನ ಭಾವಿಯ ನೀರು ತೆಗೆದುಕೊಳ್ಳುವ,

ಹಾಗೂ ಸ್ವತಂತ್ರ್ಯವಾಗಿ ಊರಿನೊಳಗೆ ತಿರುಗಾಡುವ ಅವಕಾಶಗಳಿರಲಿಲ್ಲ. ಇವತ್ತಿಗೂ ಕೆಲವು ಗ್ರಾಮೀನ ಪ್ರದೇಶಗಳಲ್ಲಿ ಈ ಪದ್ಧತಿಗಳು ರೂಢಿಯಲ್ಲಿವೆ. ಆರ್ಥಿಕವಾಗಿ ಹಿಂದುಳಿದವರಿದುದ್ದರಿಂದ ಪ್ರತಿದಿವಸ ದುಡಿದು ಬರುವ ಸ್ಥಿತಿ ಈ ವರ್ಗದ ಮಹಿಳೆಯರದಾಗಿದೆ.

ಮೇಲ್ವರ್ಗದವರು ಉನ್ನತ ಸ್ಥಾನವನ್ನು ಪಡೆದುಕೊಂಡು ಸುಖವಾಗಿ ಜೀವನವನ್ನು ಸಾಗಿಸಲಿಕ್ಕೂ ಮೂಲ ಕಾರಣ ಕೆಳವರ್ಗದವರ ಶ್ರಮವಾಗಿದೆ. ಮಹಿಳೆಯನ್ನು ಮಾತೃಭೂಮಿಗೆ ಹೋಲಿಸುತ್ತಾರೆ. ತಾಯಿ ಎಂದು ಸಂಭೋದಿಸುವಾಗ ಮೇಲ್ವರ್ಗದ ಮಹಿಳೆಯಾಗಲಿ, ಕೆಳವರ್ಗದ ಮಹಿಳೆಯಾಗಲಿ ಹೆಣ್ಣು ಹೆಣ್ಣೇ ಆದ್ದರಿಂದ ಎಲ್ಲಾ ಸ್ತ್ರೀಯರು ಸ್ಥಾನಮಾನಗಳು ಒಂದೇ ರೀತಿಯಲ್ಲಿರಬೇಕು. ಒಬ್ಬ ವೇಶ್ಯೆಯಾಗಿ ಬದುಕುವ ಕೆಳವರ್ಗದ ಮಹಿಳೆಯಲ್ಲೂ ಮಾನವೀಯ ಮೌಲ್ಯಗಳು ಅಡಗಿರುತ್ತವೆಂಬುದು ದು.ನಿಂ.ಬೆಳಗಲಿಯವರ 'ಮುಳ್ಳು ದಾರಿಯಲಿ ಬಿರಿದ ಹೂವುಗಳು' ಎಂಬ ಕಥಾ ಸಂಕಲನದಲ್ಲಿ ಹಾಗೂ ಕುವೆಂಪುರವರು 'ಮಲೆಗಳಲ್ಲಿ ಮಧುಮಗಳು' ಎಂಬ ಕಾದಂಬರಿಯಲ್ಲಿ ದಲಿತ ಚಿತ್ರಣವನ್ನು ಗಮನಿಸಬಹುದು.

ಒಟ್ಟಾರೆಯಾಗಿ ಹೇಳಬೇಕೆಂದರೆ ನಮ್ಮ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಕೆಳವರ್ಗದ ಮಹಿಳೆ ಯಾವ ರೀತಿಯಾಗಿ ತನ್ನ ಬದುಕನ್ನು ರೂಪಿಸಿಕೊಂಡಿದ್ದಳು ಮತ್ತು ಈ ಮಹಿಳೆಯರು ರಾಜಕೀಯವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆಂಬುದನ್ನು ನೋಡಬಹುದು. ರಾಯಚೂರು ಜಿಲ್ಲಾ ಶಾಸನಗಳಲ್ಲಿ ಯಾವುದೇ ರೀತಿಯಾಗಿ ಈ ಕೆಳವರ್ಗದ ಮಹಿಳೆಯರ ಬಗ್ಗೆ ಉಲ್ಲೇಖವಾಗುವುದಿಲ್ಲ. ಏಕೆಂದರೆ ಅವರಿಗೆ ತಮ್ಮ ಬದುಕು ಸಾಗಿಸುವುದೇ ಕಷ್ಟವಿರುವಾಗ ಇವರು ಅಶಾಸನಗಳನ್ನು ಹಾಕಿಸಲು ಎಂದಾದರೂ ಸಾಧ್ಯವೆ. ಆದ ಕಾರಣ ಇವರುಗಳು ಯಾವುದೇ ರೀತಿಯಾಗಿ ಧಾರ್ಮಿಕ ಕಾರ್ಯಗಳಲ್ಲಿ ಪಾಲ್ಗೋಳ್ಳುತ್ತಿರಲಿಲ್ಲ ಎಂದು ಹೇಳಬಹುದು.

**ಅಡಿಟಿಪ್ಪಣಿಗಳು**

೧. ದೇವರಕೊಂಡಾರೆಡ್ಡಿ(ಸಂ), ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೭, ಪು.XIVII

೨. ಚೆನ್ನಕ್ಕ ಪಾವಟೆ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪು.೧೬೩

೩. ದೇವರಕೊಂಡಾರೆಡ್ಡಿ(ಸಂ), ಪೂರ್ವೋಕ್ತ, ಪು.೩೫೦

೪. ಅದೇ, ಪು.೪೫

೫. ಅದೇ, ಪು.೫೬

೬. ಅದೇ, ಪು.೪೬

೭. ಅದೇ, ಪು.೧೭೭

೮. ಅದೇ, ಪು.೩೪೬

೯. ಅದೇ, ಪು.೩೬೧

೧೦. ಯಾಸೀನ್ ಎಂ.ಖುದ್ದೂಸಿ, ಸೀತಾರಾಮ್ ಜಾಗೀರದಾರ್, ಕರ್ನಾಟಕದ ಪರ್ಶಿಯನ್ ಮತ್ತು ಅರೇಬಿಕ್, ಉರ್ದು ಶಾಸನಗಳು, ಪು.೨೬೨

೧೧. ಸರಸ್ವತಿ ಎಸ್., *ವಿಜಯನಗರ ಕಾಲದಲ್ಲಿ ಉದ್ಯೋಗಸ್ಥ ಮಹಿಳೆ,* ವಿಜಯನಗರ ಅಧ್ಯಯನ ಸಂಪುಟ ೩, ಪು.೮೨

೧೨. ಅದೇ, ಪು.೮೩

೧೩. ದೇವರಕೊಂಡಾರೆಡ್ಡಿ(ಸಂ), ಪೂರ್ವೋಕ್ತ, ಪು.೮೧

೧೪. ಭಾರತಿ, ರಾಯಚೂರು ಜಿಲ್ಲೆಯ ಶಾಸನಗಳ ಸಮಗ್ರ ಅಧ್ಯಯನ, ಪು.೧೭೫

೧೫. ಮಹೇಶ, ದೇವದುರ್ಗ ತಾಲೂಕಿನ ಶಾಸನಗಳು ಮತ್ತು ದೇವಾಲಯಗಳು, ಪು.

೧೬. ವಿಶ್ವನಾಥ, ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಶ, ಪು.೧

೧೭. ಕೋದಂಡರಾಮ ಎನ್.ಕೆ., ಮಹಿಳೆ ಮತ್ತು ಸಾಮಾಜಿಕತೆ, ಪು.೪೫

## ಅಧ್ಯಾಯ ೪

# ಮಹಿಳೆಯರ ಸ್ಥಿತಿಗತಿ

೪.೧. ಸಾಮಾಜಿಕ ಸೇವೆಯಲ್ಲಿ ಮಹಿಳೆಯರು

೪.೨. ಶಿಕ್ಷಣ

೪.೩. ಮಹಾಸತಿಯರು

೪.೪. ವೀರ ರಮಣಿಯರು

೪.೫. ವೇಶ್ಯೆಯರು

೪

# ಮಹಿಳೆಯರ ಸ್ಥಿತಿಗತಿ

ಯಾವುದೇ ಒಂದು ಪ್ರದೇಶದ ಪ್ರಸ್ತುತ ಸ್ಥಿತಿಗತಿಗಳಲ್ಲಿ ಆ ಪ್ರದೇಶದ ಇತಿಹಾಸದ ಛಾಯೆ ಇದ್ದೇ ಇರುತ್ತದೆ. ಹಾಗೆಯೇ ರಾಯಚೂರಿನ ಇಂದಿನ ಸ್ಥಿತಿಗತಿ, ನಡೆ-ನುಡಿ, ಭಾಷೆ, ಸಾಹಿತ್ಯ, ಧರ್ಮ, ನಂಬಿಕೆ ಮುಂತಾದವುಗಳಲ್ಲಿ ಇತಿಹಾಸದ ದಟ್ಟ ಪ್ರಭಾವವಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ರಾಯಚೂರು ಜಿಲ್ಲೆಯ ಮಹಿಳೆಯರ ಸ್ಥಿತಿಗತಿಗಳನ್ನು ಅವಲೋಕಿಸುವಾಗಲೂ ಇದು ಇನ್ನು ಹೆಚ್ಚು ಸ್ಪಷ್ಟವೆನಿಸುತ್ತದೆ.

ರಾಯಚೂರಿನ ಇತಿಹಾಸ ವೈಶಿಷ್ಟಪೂರ್ಣವಾದದ್ದು. ಈ ಪ್ರದೇಶವನ್ನು ತಮ್ಮದಾಗಿಸಿಕೊಳ್ಳಲು ಹೋರಾಡಿದವರು ಅನೇಕರು. ಆದರೆ ಯಾವ ರಾಜ ಮನೆತನವೂ ಇಲ್ಲಿ ನೆಲೆಯೂರಿ ನಿಲ್ಲಲಿಲ್ಲವೆಂಬುದು ಗಮನಿಸುವಂತಹ ಅಂಶ. ಹಿಂದೂ ಮತ್ತು ಮುಸ್ಲಿಂ ದೊರೆಗಳ ಆಳ್ವಿಕೆಗೊಳಗಾದ ರಾಯಚೂರು ಜಿಲ್ಲೆಯಲ್ಲಿ ನಿಜಾಮ ದೊರೆಗಳ ಪ್ರಭಾವ ಹೆಚ್ಚಾಗಿ ಕಂಡುಬರುತ್ತದೆ. ಅದರಲ್ಲೂ, ಮಹಿಳೆಯರ ಸ್ಥಿತಿಗತಿಗಳನ್ನು ನಿರ್ಧರಿಸುವಾಗಲಂತೂ ಅದು ಹೆಚ್ಚು ನೆನಪಿಗೆ ಬರುತ್ತದೆ.[೧]

ರಾಯಚೂರು ಜಿಲ್ಲೆಯ ಮಹಿಳೆಯರ ಸ್ಥಿತಿಗತಿಗಳನ್ನು ಅವಲೋಕಿಸುವಾಗ ನಮ್ಮ ಭಾರತೀಯರ ಸ್ಥಿತಿಗತಿಗಳನ್ನು ಅವಲೋಕಿಸುವಾಗ ನಮ್ಮ ಭಾರತೀಯ ಸಾಮಾಜಿಕ ವ್ಯವಸ್ಥೆಯ ಬಗ್ಗೆ ಸ್ವಲ್ಪ ತಿಳಿದುಕೊಳ್ಳುವುದು ಅವಶ್ಯಕವೆನಿಸುತ್ತದೆ. ಸ್ತ್ರೀಯನ್ನು ದೇವತೆ ಎಂದು ಪೂಜಿಸುವ ಭಾವನಾ ಪರಂಪರೆಯು ಇಲ್ಲಿದ್ದರೂ ಕುಟುಂಬದಲ್ಲಿ ಈಕೆಯ ಸ್ಥಾನ ಮಾತ್ರ ಎರಡನೆಯದೆ. ಆಕೆ 'ದುರ್ಬಲಳು' ಮತ್ತು 'ಅವಲಂಬಿತಳು' ಎನ್ನುವ ಹಣೆಪಟ್ಟಿಯನ್ನು ಗಟ್ಟಿಗೊಳಿಸುವ ಪ್ರಕ್ರಿಯೆ ಸಹಜವಾಗಿ ಸಾಗಿದೆ. ಈ ಬಿರುದೀಕರಣದ ಮೂಲಕ ಆಕೆಯ ವ್ಯಕ್ತಿತ್ವ ಹಾಗೆಯೇ ರೂಪಿತವಾಗುವಂತಹ ವಾತಾವರಣ ಸೃಷ್ಟಿಯಾಗಿದೆ. ಇದರಿಂದಾಗಿ ಸ್ತ್ರೀಪುರುಷ ಸಮಾನಳಾಗಿ ಇಂದಿಗೂ ನಿಲ್ಲಲಾಗುತ್ತಿಲ್ಲ. ಗಾರ್ಗಿ, ಮೈತ್ರೈಯಿ, ಝಾನ್ಸಿ ಲಕ್ಷ್ಮಿಬಾಯಿ, ಕಿತ್ತೂರ ಚೆನ್ನಮ್ಮನವರ ಉದಾಹರಣೆ ಕೊಡುತ್ತಾ ಸ್ತ್ರೀಯರಿಗೆ ಪ್ರಾಚೀನ ಕಾಲದಿಂದಲೂ ಎಲ್ಲ ರಂಗದಲ್ಲೂ ಅವಕಾಶವಿತ್ತು ಎಂದು ವಿವರಿಸುವವರ ಸಂಖ್ಯೆಗೇನೂ ಕೊರತೆಯಿಲ್ಲ. ಇಂದಿರಾಗಾಂಧಿಯವರ ಉದಾಹರಣೆ ಕೊಟ್ಟು ಸಮರ್ಥಿಸಿಕೊಳ್ಳುವವರು ಉಂಟು. ಕೆಲವು ಜನ

ಮಹಿಳೆಯರನ್ನು ಉದಾಹರಿಸಿದ ಮಾತ್ರಕ್ಕೆ ಎಲ್ಲ ಮಹಿಳೆಯರು ಹಾಗೆಯೇ ಇದ್ದರು ಎಂದು ಹೇಳಲಾಗುವುದಿಲ್ಲ.[೨]

ಪ್ರಾಚೀನ ಕಾಲದಿಂದ ಇಂದಿನವರೆಗೆ ಉದಾಹರಣೆಯಾಗಿರುವ ಮಹಿಳೆಯರಲ್ಲಿ ಬಹುಪಾಲು ಜನರು ಸಾಮಾಜಿಕ ಮೇಲ್ಪಂಕ್ತಿಯಲ್ಲಿದ್ದು ಆರ್ಥಿಕ ಮತ್ತು ರಾಜಕೀಯ ಸೌಲಭ್ಯಗಳನ್ನು ಹೊಂದಿದವರಾಗಿದ್ದಾರೆಂಬುದು ಬಹು ಮುಖ್ಯ ಅಂಶವಾಗಿದೆ. ಅಂದರೆ ಕೆಲವು ಸಾಮಾನ್ಯ ಅಂಶಗಳಿರುತ್ತವೆ ಎನ್ನುವುದು ವಿಧಿತವಾಗುತ್ತದೆ. ಈ ದಿಸೆಯಲ್ಲಿ ಯೋಚಿಸುವಾಗ ರಾಯಚೂರಿನಲ್ಲಿ ಶಿಕ್ಷಣದ ಇತಿಹಾಸ ಗಮನಿಸಿದರೆ ಮೇಲಿನ ಮಾತು ಸತ್ಯವೆನಿಸುತ್ತದೆ. ನಿಜಾಮರ ಆಳ್ವಿಕೆಯಲ್ಲಿ ಮತ್ತು ಸ್ವತಂತ್ರ್ಯ ಸಿಕ್ಕ ಪ್ರಾರಂಭದ ದಿನಗಳಲ್ಲಿ ಅಕ್ಷರಸ್ಥರಾಗಿದ್ದ ಬಹುತೇಕ ಮಹಿಳೆಯರು ಶ್ರೀಮಂತರು ಮತ್ತು ಸಾಂಸ್ಕೃತಿಕವಾಗಿ ಮುಂದುವರಿದ ಮೇಲ್ಜಾತಿಯವರೇ ಆಗಿದ್ದಾರೆ.

## ೪.೧. ಸಾಮಾಜಿಕ ಸೇವೆಯಲ್ಲಿ ಮಹಿಳೆಯರು

ಒಂದು ಸಮಾಜವನ್ನು ನಾವು ಅವಲೋಕಿಸಿದಾಗ ಮತ್ತು ಅಲ್ಲಿಯ ಸಾಮಾಜಿಕ ವ್ಯವಸ್ಥೆಯ ಬಗ್ಗೆ ನಮಗೆ ತಿಳಿದುಬರಬೇಕಾದರೆ ನಾವು ಇತಿಹಾಸದ ಮೊರೆ ಹೋಗಬೇಕಾಗುತ್ತದೆ. ಯಾವುದೇ ಒಂದು ಸಮಾಜವನ್ನು ತೆಗೆದುಕೊಂಡಾಗ ಅದು ಪ್ರಾಗೈತಿಹಾಸಿಕ ಕಾಲದಿಂದ ಆಧುನಿಕ ಕಾಲದವರೆಗೆ ಮಾಡಿದ ಅನೇಕ ಸಾಧನೆಗಳು ನಮಗೆ ಸ್ಪಷ್ಟವಾಗುತ್ತವೆ. ಅಲ್ಲದೆ ಪ್ರಾಗೈತಿಹಾಸಿಕ ಕಾಲದ ಜನ ಸಮುದಾಯವು ಜೀವನೋಪಾಯಕ್ಕಾಗಿ ಬಳಸುತ್ತಿದ್ದ ವಸ್ತುಗಳು, ಉಪಕರಣಗಳು, ಸ್ಮಾರಕಗಳಾದ ದೇವಾಲಯ, ಕೋಟೆ, ಶಾಸನಗಳು ಮುಂತಾದವುಗಳು. ನಮಗೆ ಅವರು 'ಧಾರ್ಮಿಕ ರಂಗದ, ಸಾಮಾಜಿಕ ರಂಗದ ರಾಜಕೀಯರಂಗದ, ಆರ್ಥಿಕ, ಕಲೆ, ಸಾಹಿತ್ಯ ಮುಂತಾದ ಸಮಾಜದ ವಿವಿಧ ರಂಗಗಳ ಕಾರ್ಯಕ್ರಮದಲ್ಲಿ ಮಹಿಳೆಯರು ವಹಿಸಿದ್ದ ಪಾತ್ರ, ಗಳಿಸಿದ್ದ ಸಾಧನೆ ಹಾಗೂ ನೀಡಿದ್ದ ಕೊಡುಗೆಗಳ ಬಗ್ಗೆ ನಂಬಲರ್ಹವಾದ ವಿಷಯಗಳ ಭಂಡಾರವನ್ನೇ ಒದಗಿಸಿಕೊಡುತ್ತವೆ.[೩] ಇವುಗಳನ್ನೆಲ್ಲಾ ವಿಚಾರ ಮಾಡಿದರೆ ರಾಣಿಯರಿಗೆ ಮಾತ್ರವಲ್ಲದೆ ಸಮಾಜದ ಎಲ್ಲಾ ಸ್ತರಗಳ ಸ್ತ್ರೀಯರಿಗೆ ಸಮಾಜ ಜೀವನದಲ್ಲಿ ಭಾಗವಹಿಸಿ ತಮ್ಮದೇ ಆದ ರೀತಿಯಲ್ಲಿ ಸೇವೆ ಸಲ್ಲಿಸಲು, ಕೊಡುಗೆಗಳನ್ನು ನೀಡಲು ತಕ್ಕ ಅವಕಾಶಗಳಿದ್ದವು ಎಂಬುದನ್ನು ನೋಡಬಹುದು.

ಆರಂಭದಿಂದಲೂ ಕರ್ನಾಟಕ ಸಮಾಜ ಜೀವನದ ವೈಶಿಷ್ಟ್ಯಕ್ಕೆ ಸ್ಫೂರ್ತಿಯೂ, ಪ್ರೇರಕ-ಚಾಲಕ-ಶಕ್ತಿಯೂ ಧರ್ಮವೇ ಜನರ ವೈಯಕ್ತಿಕ-ಸಾಮಾಜಿಕ ಬದುಕಿನ ಪ್ರಾಣವಾಯು ಧರ್ಮವೇ ಆಗಿರುವುದರಿಂದ, ಅತ್ಯಂತ ಹಿತಕರವಾದ ಧಾರ್ಮಿಕ ಪರಂಪರೆಯನ್ನು ದೇವಾಲಯಗಳ ನಿರ್ಮಾಣ, ಎಲ್ಲಾ ಧರ್ಮಗಳಿಗೆ

ವಿಭಿನ್ನ ಬಗೆಯ ಕಾಣಿಕೆಗಳ ಅರ್ಪಣೆ ಮಾಡಿ ದೈವಿಕವಾದ ಸಹಿಷ್ಣುತಾ ಸಂಪ್ರದಾಯವನ್ನು ಉಳಿಸುವುದೇ ಮುಂತಾದ ಧಾರ್ಮಿಕ ಕಾರ್ಯಗಳ ಮೂಲಕ ಉಳಿಸಿ ಬೆಳಸಿಕೊಂಡು ಬರುವುದರಲ್ಲಿ ಈ ಕಾಲದ ಮಹಿಳೆಯರೂ ಸಹ ಹಿಂದೆ ಬೀಳಲಿಲ್ಲ ಎಂಬುದನ್ನು ಶಾಸನಗಳು ದೃಢಪಡಿಸುತ್ತವೆ.[೪]

ರಾಯಚೂರು ತಾಲೂಕಿನ ಮಟಮಾರಿ ಗ್ರಾಮದ ಬಾವಿಯ ಗೋಡೆಯ ಮೇಲಿನ ಶಾಸನವು ರಾಜೀಬಾಯಿಯು ದೇವರಗುಡಿಯ ನಿಮಿತ್ಯವಾಗಿ ಬಾವಿಯನ್ನು ತೋಡಿಸಿದ ಕಾರಣ ಮೊಟಮಾರಿಯ ಮೊಖಸಾಯಿ, ನಾಯಕವಾಡಿ, ಕಿಲ್ಲೆ ಆದವನಿಯವರು ಗೌಡ ಪ್ರಜೆಗಳು ರಾಜೀಬಾಯಿಗೆ ಒಂದು ಒಕ್ಕಳ ಹೊಲವನ್ನು ದಾನವಾಗಿ ಕೊಡುತ್ತಾರೆ ಎಂಬ ವಿಷಯವಿದೆ. ಈ ಶಾಸನದ ಕಾಲ ೧೭ನೇ ಶತಮಾನದ್ದಾಗಿದೆ.[೫] ಅದೇ ರೀತಿಯಾಗಿ ಕಲ್ಮಾಲದ ಈಶ್ವರ ದೇವಾಲಯದ ಆವರಣದಲ್ಲಿನ ಶಾಸನವು ಬುಟ್ಟರಸ, ಪಿಟ್ಟಬ್ಬೆ ಮತ್ತು ಕನ್ನಿರದೇವ ಇವರು ಮೂವರು ಉತ್ತರ ಸಂಕ್ರಾಂತಿಯ ಕಾಲದಲ್ಲಿ ಮಲ್ಲಿಕಾರ್ಜುನ ದೇವರ ಪೂಜೆಗಾಗಿ ಬುಟ್ಟರಸ, ಪಿಟ್ಟಬ್ಬೆಯರು ಆದಿತ್ಯ ಭಟ್ಟಾರನಿಗೆ ೩೪ ಮತ್ತರು ಭೂಮಿಯನ್ನು ನೀಡಿದ ಉಲ್ಲೇಖವಿದೆ. ದೇವದುರ್ಗ ತಾಲೂಕಿನ ವೀರಗೋಟ ಎಂಬ ಗ್ರಾಮದ ಮೌನೇಶ್ವರರು ತಪಸ್ಸು ಮಾಡಿದ್ದರೆಂದು ಹೇಳುವ ಗುಡಿಯಲ್ಲಿರುವ ಶಾಸನವು ಪದ್ಮಿಸೆಟ್ಟಿ ಸಂಕರದೇವರಿಗೆ ಗ್ರಾಮ ಮತ್ತು ಭೂದಾನವನ್ನು ನೀಡಿರುವ ಉಲ್ಲೇಖವಿದೆ.[೬] ತ್ರಿಭುವನಮಲ್ಲನ ಆಳ್ವಿಕೆಯಲ್ಲಿ ಮುಸ್ಯಣಭಟ್ಟ ಮತ್ತು ಅವನ ಪತ್ನಿ ನಾಲಿಕಬ್ಬೆಯರು ಮಹಾದೇವರ ಧೂಪ ದೀಪ ಮತ್ತು ಪೂಜಾಕಾರ್ಯಗಳಿಗಾಗಿ ಭೂದಾನ ನೀಡಿರುವಂತೆ ಉಲ್ಲೇಖವಿದೆ.[೭]

ಲಕ್ಷುಮಕ್ಕ ತನ್ನ ತಂದೆಯ ಕಡೆಯಿಂದ ತನ್ನ ಭಾಗವಾಗಿ ಬಂದ ಬೆಳೆಯ ಭಾಗವನ್ನು ಕೋಟಿಹೋಮಕ್ಕೆ, ಮತ್ತು ತನ್ನ ತಂದೆ ಗಬ್ಬೂರಲ್ಲಿ ಪ್ರತಿಷ್ಠೆ ಮಾಡಿಸಿದ ಹರಿಹರ ದೇವರಿಗೆ ಮತ್ತು ಸಿದ್ಧಸೋಮನಾಥ ದೇವರಿಗೆ ಪೂಜೆ, ಪುನಸ್ಕಾರ, ಧೂಪ, ದೀಪ, ನೈವೇದ್ಯ, ವಸ್ತ್ರಾಲಂಕಾರ ಚೈತ್ರ ಪೈತ್ರ, ಧರ್ಮದ ಏತಕ್ಕೆ ಸಲ್ಲುವಂತೆ ತನ್ನ ಭಾಗಕ್ಕೆ ಬಂದ ಬೆಳೆಯನ್ನು ಬಿಟ್ಟುಕೊಡುತ್ತಾಳೆಂಬ ಉಲ್ಲೇಖವಿದೆ. ಗಬ್ಬೂರಿನ ಜಡೇಶ್ವರ ದೇವರಿಗೆ ಸೂಳೆ ಹೇಮವ್ವೆ ಎಂಬುವಳು ಒಂದು ಹಣವನ್ನು ನೀಡಿದ ಉಲ್ಲೇಖವಿದೆ.[೮] ಗೂಗಲ್ಲು ಸು.ಕ್ರಿ.ಶ.೧೮೨೫ರಲ್ಲಿ ಕಂಚಗಾರ ಅಮ್ಮನ ದೇವಾಲಯಕ್ಕೆ ಗಂಟೆಯನ್ನು ಮಾಡಿಸಿದಂತೆ ಉಲ್ಲೇಖವಿದೆ.[೯] ದೇವದುರ್ಗ ಕೆರೆ ಕಟ್ಟಿಸಿ ದೇವದುರ್ಗವನ್ನು ನಿರ್ಮಿಸಿದ. ಊರಿನ ಗೋವರ್ಧನ ಗೋಪಾಲಕೃಷ್ಣನ ಪ್ರತಿಷ್ಠೆ ಮಾಡಿಸಿ, ಪೇಟೆ ಕಟ್ಟಿಸಿ, ಸಂತೆ ಸೇರಿಸಿದ ಉಲ್ಲೇಖವಿದೆ.[೧೦] ಮತ್ತು ಮುಂದೆ ಮಲ್ಲೇದೇವರದುರ್ಗವನ್ನು ನಿರ್ಮಿಸಿದ್ದು ಮತ್ತು ಶಾಸನ ಮುಂದುವರೆಸಿ ಅರಕೆರಿಯ ಗವುಡ ಹೇಮಣ್ಣ, ಅವನ ಮಗ ತಿಂಮಣಗವುಡ, ಇವನ ಮಗ ಚಿಕ್ಕಕಸತಿಗವುಡ ಮುಂದೆ ಕಾಸಲಯ್ಯನ

ಮಕ್ಕಳು ಗವುಡಪ್ಪ, ನಾರಾಯಣ, ವಾಸುದೇವ, ಹೆಣ್ಣು ಮಕ್ಕಳು ವೀರವ್ವ, ತಿಮ್ಮವ್ವ, ಕಾನವ್ವ, ಕೃಷ್ಣಾಂಮ, ಸಕ್ಕರೆವ್ವ, ವರದವ್ವ, ಮಂಗಮ್ಮ, ವೆಂಕಮ್ಮ ಎಂದು ಮತ್ತು ಕಾಸಲಯ್ಯನಿಗೆ ಲಕ್ಷಮವ್ವ ಮತ್ತು ವಂಕಮ್ಮ ಎಂಬ ಇಬ್ಬರು ಪತ್ನಿಯರಿದ್ದರು ಎಂಬುದನ್ನು ತಿಳಿಸುತ್ತದೆ.[೧೧] ಮಸ್ಕಿಯ ಹಾಳುಕ್ಯಾತನಹಟ್ಟಿಯ ಆಂಜನೇಯ ದೇವಾಲಯದ ಎದುರು ಇರುವ ಶಾಸನವು ಪರಕಾರ ಎಳಮೋಸಂಜೆ ಮಗಳು ಸೋಮಕ್ಕ ಎಂಬುವವಳು ೧೪ ಮತ್ತರು ಭೂಮಿಯನ್ನು ಪಂಚಲಿಂಗಕ್ಕೆ ನೀಡಿದಂತೆ ತಿಳಿಸುತ್ತದೆ. ಈ ಶಾಸನದ ಕಾಲ ಸು.ಕ್ರಿ.ಶ.೧೩ನೇ ಶತಮಾನಕ್ಕೆ ಸೇರಿದುದಾಗಿದೆ. ಚಾಳುಕ್ಯ ಅರಸ ಜಗದೇಕಮಲ್ಲನ ಕಾಲದಲ್ಲಿ ಅವನ ಮಗಳು ಸೋಮಲದೆವಿಯು ಬಸದಿಯ ಭೋಗಕ್ಕೆ ಐವತ್ತು ಮತ್ತರು ಭೂಮಿ ಮತ್ತು ಅಕಡಿ ಮತ್ತರು ೫೦ನ್ನು ಕೊಡಿಸುತ್ತಾಳೆ. ಇದಲ್ಲದೆ ದೀಪಕ್ಕೆ, ಒಂದು ಗಾಣ, ಹೂವಿನ ತೋಟವೊಂದನ್ನು ದಾನ ಬಿಡುತ್ತಾಳೆಂದು ಉಲ್ಲೇಖಿಸುತ್ತದೆ.[೧೨]

ಮಾನ್ವಿ ತಾಲೂಕಿನ ತಡಕಲ್ ಗ್ರಾಮದ ಅಗಸೆಯ ಗೋಡೆಗೆ ಸೇರಿರುವ ಶಾಸನ ಚಾಳುಕ್ಯ ಚಕ್ರವರ್ತಿ ಜಗದೇಕಮಲ್ಲನು ಏತಗಿರಿಯ ನೆಲೆವೀಡಿನಿಂದ ರಾಜ್ಯಭಾರ ಮಾಡುತ್ತಿದ್ದಾಗ. ಅವನ ರಾಣಿ ಬಿಜ್ಜಲದೇವಿಯು ಅಗ್ರಹಾರ ತಡಕಲ್ಲಿನಲ್ಲಿ ದೇವಾಲಯಕ್ಕೆ ಸೂರ್ಯಗ್ರಹಣದ ದಿವಸ ಭೂದಾನ ನೀಡಿದಂತೆ ತಿಳಿಸುತ್ತದೆ.[೧೩] ಕಾಲ ಕ್ರಿ.ಶ.೨೩-೩-೧೦೩೩ (ಪು.ಸಂ.೨೪೯) ಮಲ್ಲಿಗಿ ಮಡುವು ಈಶ್ವರ ಗುಡಿಯ ಕಲ್ಲಿನ ಮೇಲಿನ ಶಾಸನವು ಪುಳಿಯಮ್ಮ ಮತ್ತು ೩೨ ಜನರು ಸೇರಿ ಆ ಗ್ರಾಮದ ಮೂಲಸ್ಥಾನ ದೇವರಿಗೆ ೧೩x೨೯ ಕೈ ಅಳತೆಯ ನಿವೇಶನವನ್ನು ಮತ್ತು ತೋಟವನ್ನು ದೇವಾಲಯದ ಯತಿಗಳಿಗೆ ನೀಡುತ್ತಾರೆ. ಅದೇ ರೀತಿಯಾಗಿ ಎರಡು ಮತ್ತರು ಭೂಮಿಯನ್ನು ನಾಗಿಯಬ್ಬೆಯೆಂಬುವವಳಿಗೆ ದಾನ ನೀಡಿರುವುದಾಗಿ ಉಲ್ಲೇಖಿಸುತ್ತದೆ.[೧೪] ಇದು ಕ್ರಿ.ಶ.೧೦ನೇ ಶತಮಾನಕ್ಕೆ ಸಮನಾಗಿದೆ. ಮತ್ತು ಅದೇ ರೀತಿಯಾಗಿ ಕುರುಡಿ ಗ್ರಾಮದ ಗುಡಿಯ ಶಾಸನದಲ್ಲಿ ಮಹಾಪ್ರದಾನ ನಿಂಬಣ್ಣಯ್ಯನ ಮಕ್ಕಳಾದ ನಾಗಲದೇವಿ ಹಾಗೂ ಗಂಗಣಬ್ಬೆಯರನ್ನು ಇವರು ನಾಗಲದೇವಿಯು ತನಗೆ ಬಳುವಳಿಯಾಗಿ ಕೊಟ್ಟ ತೈಲಪದೇವರ ಅಗ್ರಹಾರ ರಾರಾವಿಯಲ್ಲಿ ಬಂದ ವೃತ್ತಿಯಲ್ಲಿ ಅರ್ಧ ವೃತ್ತಿಯನ್ನು ರೂಢಿಯ ಶಂಕರೇಶ್ವರ ಹಾಗೂ ನಾಗೇಶ್ವರ ದೇವರಿಗೆ ದಾನ ಮಾಡಿದಳು ಎಂದು ತಿಳಿಸುತ್ತದೆ.[೧೫]

ಕಪಗಲ್ಲು ಗ್ರಾಮದ ಈಶ್ವರ ಗುಡಿಯ ಹತ್ತಿರ ಬಾವಿಯ ಕಲ್ಲಿನ ಮೇಲಿನ ಶಾಸನವು ಚಾಳುಕ್ಯ ಚಕ್ರವರ್ತಿ ಭೂವನ್ನೈಕಮಲ್ಲನ ಹೆಂಡತಿ ಪಂಪಾದೇವಿಯು ಭೋಗೇಶ್ವರ ದೇವರಿಗೆ ಮರಿಚೇಡ ದಾರಿಯಿಂದ ಪೂರ್ವ-ಪಶ್ಚಿಮವಾಗಿ ೯ ಮತ್ತರು, ಮಠಕ್ಕೆ, ೪ ಮತ್ತರು ಬಾವಿಗೆ ೫ ಮತ್ತರು ನಂದಾದೀವಿಗೆಗೆ ೬ ಮತ್ತರು ಒಟ್ಟು ೨೪ ಮತ್ತರು ಮತ್ತು ಒಂದು ಗಾಣವನ್ನು ದಾನ ನೀಡಿದ್ದಾಳೆಂದು

ಹೇಳುತ್ತದೆ.[೧೬] ಕಾಲ ಕ್ರಿ.ಶ.೨೪-೧೨-೧೦೯೮ ಕಲ್ಲೂರಿನ ಸಾತಿಕವ್ವೆಯೆಂಬುವವಳು ಮಾಡಿಸಿದ ಕೇಶವದೇವರ ಅಂಗಭೋಗ, ನೈವೇದ್ಯ ನಂದಾದೀಪ ಚೈತ್ರ ಪವಿತ್ರಕ್ಕೆಂದು ಬಲ್ಲಕಬ್ಬೆಯ ಹೊಲದಲ್ಲಿ ಉತ್ತರ ಭಾಗವನ್ನು ಕಳೆದು ದಕ್ಷಿಣದ ತಮ್ಮ ಭಾಗವನ್ನು ಮಹಾಮಂಡಳೇಶ್ವರ ಮತ್ತು ಮಾಚಿದೇವರಸನು ದಾನ ನೀಡಿದಂತೆ ತಿಳಿಸುತ್ತದೆ.[೧೭] ಕಾಲ ಕ್ರಿ.ಶ.೨೫-೧೨-೧೧೪೨ ಬಲ್ಲಟಗಿ ಗ್ರಾಮದ ಮಸೀದಿಯ ಸಮೀಪದ ಕಲ್ಲಿನ ಮೇಲೆ ಚಾಳುಕ್ಯ ಜಗದೇಕಮಲ್ಲನ ರಾಣಿ ಸೋಮಲದೇವಿಯು ವಿಷ್ಣುದೇವಾಲಯವನ್ನು ಕಟ್ಟಿಸಿದಾಗ ಭೂಮಿಯನ್ನು ದಾನ ಮಾಡಿದ ಉಲ್ಲೇಖವಿದೆ.[೧೮] ಕಾಲ ೨೫-೧೨-೧೦೨ಲಕ್ಕೆ ಸರಿಹೊಂದುತ್ತದೆ.

ಚಕ್ರವರ್ತಿಯ ರಾಣಿ ಮಹಾದೇವಿ ಬಲ್ಲಟಗಿಯ ತ್ರೈಪುರುಷ ದೇವಾಲಯಕ್ಕೆ ಭೂಮಿಯನ್ನು ದಾನ ಬಿಟ್ಟ ವಿಷಯ ತಿಳಿಸುತ್ತದೆ.[೧೯] ಅದೇ ರೀತಿಯಾಗಿ ನುಗಡೋಣಿ ಎಂಬ ಗ್ರಾಮದ ಮಲ್ಲಪ್ಪನ ಹೊಲದಲ್ಲಿರುವ ಶಾಸನವು ಸೋಮಲದೇವಿಯು ಬಲ್ಲಟಗಿಯ ಬಂಕೇಶ್ವರ ದೇವರಿಗೆ ನಿವೇಶ, ಗಾಣ, ತೋಟ, ಕೊಟ್ಟ ವಿಷಯ ತಿಳಿಸುತ್ತದೆ. ಮಲ್ಲಟ ಗ್ರಾಮದ ಊರಿನ ಅಲ್ಲಮ ದೇವಾಲಯದಲ್ಲಿರುವ ಕಲ್ಲಿನ ಮೇಲಿನ ಶಾಸನವು ಮಾಳಯ್ಯನ ಮಗಳು ಮಲ್ಲರಸನ ಹೆಂಡತಿ ಬಿಸವಲದೇವಿಯರು ಸೇರಿ ಮಾದೇಶ್ವರ ದೇವರಿಗೆ ಆಹಾರ ದಾನಕ್ಕೆಂದು ಗಣಮಠವಾಗಿ ಕಲ್ಲಯ್ಯನಿಗೆ ಭೂದಾನ ನೀಡುತ್ತಾರೆಂದು ತಿಳಿಸುತ್ತದೆ.[೨೦] ಕಾಲ ೨೧-೨-೧೧೯೬ ಸಾಲಗುಂದೆಯ ಗ್ರಾಮದ ಜಕ್ಕಮ್ಮನ ಬಾವಿ ಸಮೀಪದ ನೀಲಕಂಠೇಶ್ವರ ದೇವಾಲಯದಲ್ಲಿರುವ ಶಾಸನವು ಸೋಮನ ಹೆಂಡತಿ ಜಕ್ಕಣಾಂಬೆ ಇವರ ಮಗ ನಾಗದೇವ ದಂಢಾದೀಶನು ಹಾಗೂ ಇವನನ್ನು ಗೌಡಪ್ರಭು ನಾಗದೇವನೆಂದೂ ಕರೆಯುತ್ತಿದ್ದರು. ಈ ನಾಗದೇವ ಸಾಲಗುಂದೆಯಲ್ಲಿ ಬಾವಿ, ಕೆರೆ, ಹೊಕ್ಕರಸೆ, ದೇವತಾ ಮಂದಿರಗಳನ್ನು ಕಟ್ಟಿಸಿದ್ದು ನಾಗೇಶ್ವರ ದೇವಾಲಯಗಳ ನಿರ್ವಹಣೆಗಾಗಿ ತುಂಗಭದ್ರ ತೀರದಲ್ಲಿ ೧೨ ಮತ್ತರು ಭೂಮಿ ಒಂದು ಗಾಣವನ್ನು ನೀಡಿದ ವಿಷಯವನ್ನು ಉಲ್ಲೇಖಿಸುತ್ತದೆ.[೨೧] ಕಾಲ ಕ್ರಿ.ಶ.ಸುಮಾರು ೧೦೬೩. ಮುಕ್ಕುಂದಿಯ ಮುರಹರಿ ದೇವಾಲಯದ ನವರಂಗ ಗೋಡೆಗೆ ಹಾಕಿರುವ ಶಾಸನವು ಬೆನಿಮಯ ಅವನ ಹೆಂಡತಿ ಚಂಡಿಯಕ್ಕ ಮತ್ತು ಮಗ ನಾಚಣ ಇಬ್ಬರು ಎಂದು ಹಾಗೂ ಶಾಸನವು ಮುಂದುವರೆದು ಬೆಮಯನು ಕೇಶವದೇವರು ಮಹಾಮಂಡಳೇಶ್ವರ ದೇವಾಲಯಕ್ಕೆ ಭೂಮಿ ನೀಡಿದ ಬಗ್ಗೆ ಉಲ್ಲೇಖಿಸುತ್ತದೆ.[೨೨] ಕಾಲ ಕ್ರಿ.ಶ.೨೩-೬-೧೧೩೪ ಮುಕ್ಕುಂದಿಯ ಪಾಪನಾಥೇಶ್ವರ ದೇವಾಲಯ ಮುಂಭಾಗದಲ್ಲಿ ನೆಟ್ಟಿರುವ ಶಾಸನ ಹೀಗೆ ತಿಳಿಸುತ್ತದೆ. ತ್ರೈಲೋಕ್ಯ ಮಹಾದೇವಿ ತುಂಗಭದ್ರಾ ನದಿಯ ತೀರದ ಕಪಾಳೇಶ್ವರ ದೇವರಿಗೆ ೧೨ ಮತ್ತರು ಕರಿಯ ಭೂಮಿಯನ್ನು ಒಂದು ತೋಟ ಮತ್ತು ನಂದಾದೀಪಕ್ಕಾಗಿ ಒಂದು ಗಾಣವನ್ನು ದಾನ ಬಿಡುತ್ತಾಳೆಂದು ಉಲ್ಲೇಖೀಸುತ್ತದೆ.[೨೩] ಇದರ ಕಾಲ ಕ್ರಿ.ಶ.೨೪-೧೨-೧೦೬೬. ಅದೇ ರೀತಿಯಾಗಿ

ಸಿದ್ಧರಾಂಪುರ ಗ್ರಾಮದ ಅಂದರಕಲ್ಲುಮಟ್ಟಿಯ ಮಂಟಪದ ಬಳಿ ಹುಟ್ಟುಬಂಡೆಯಲ್ಲಿನ ಶಾಸನವು ಸೀಮರಸ ಮತ್ತು ನಾಗರಸರು ತಂದೆ ಸೋಮರಸ ತಾಯಿ ಕಾಮಂಮನಿಗೆ ಪುಣ್ಯವಾಗಬೇಕೆಂದು ಕೆರೆಯನ್ನು ಕಟ್ಟಿಸಲಾಗಿತ್ತು. ಮತ್ತು ಶ್ರೀವಿರೂಪಾಕ್ಷ ಮತ್ತು ಶ್ರೀವಿಠಲದೇವರ ಭಕ್ತನಾದ ನಾಗರಸನು ಅರವಟ್ಟಿಗೆ ಮಂಟಪವನ್ನು ಕಟ್ಟಿಸಿದಂತೆ ತಿಳಿಸುತ್ತದೆ.[೨೪] ಕಾಲ ಕ್ರಿ.ಶ.೨೨-೩-೧೫೨೩. ಬಳಗನೂರು ಗ್ರಾಮದ ಲಕ್ಷ್ಮೀನಾರಾಯಣ ದೇವಾಲಯದ ಮಂಟಪಕ್ಕೆ ಸೇರಿರುವ ಶಾಸನದಲ್ಲಿ ಈ ರೀತಿ ಉಲ್ಲೇಖಿಸಲಾಗಿದೆ. ಹೈಹಯ ವಂಶದ ಅಲ್ಲಹುಲಿದೇವನು ತನ್ನ ಪತ್ನಿ ವೈಷ್ಣವ ರಬ್ಬಲದೇವಿ ಮತ್ತು ಮಕ್ಕಳು, ಮಂತ್ರಿಗಳೊಂದಿಗೆ ಸೇರಿ ಅಗ್ರಹಾರ ಹಿರಿಯ ಬಳಗಾರನೂರಿನಲ್ಲಿ ಸೆಟ್ಟಿಯರು ಮಾಡಿಸಿದ ಲಕ್ಷ್ಮೀನಾರಾಯಣ ದೇವರಿಗೆ ಹದಿನೆಂಟು ಮತ್ತರು ಭೂದಾನವನ್ನು ನೀಡಿದ ವಿಷಯ ತಿಳಿಸುತ್ತದೆ.[೨೫] ಇದರ ಕಾಲ ಕ್ರಿ.ಶ.ಸು.೩೧-೧೦-೧೧೯೧.

ದಿದ್ದಿಗಿಯ ಊರಿನ ಬಸಮ್ಮಗೊಲ್ಲರ್ ಅವರ ಹೊಲದಲ್ಲಿಯ ಶಾಸನವು ಕಾಳಭಟ್ಟನೆಂಬುವವನು ೧೦೮ ಜನರಿಗೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಇದರಲ್ಲಿ ಮಾರಕಬ್ಬೆ, ಪಿರಿಯಕಬ್ಬೆ ಸರಸ್ವತಿಯರು ದಾನ ತೆಗದುಕೊಂಡವರಾಗಿದ್ದಾರೆ.[೨೬] ಕಾಲ ಕ್ರಿ.ಶ.೧೯-೧೦-೯೧೮.

ಒಟ್ಟಾರೆಯಾಗಿ ಹೇಳಬೇಕೆಂದರೆ ನಮ್ಮ ಪ್ರಾಚೀನ ಜನರಲ್ಲಿಯೂ ಸಹ ಸಾಮಾಜಿಕ ಪ್ರಜ್ಞೆಯಿತ್ತೆಂಬುದಲ್ಲದೆ, ಸಮಾಜದಲ್ಲಿನ ಜನರ ಉಪಯೋಗಗಳಿಗೆ ತಕ್ಕಂತೆ ಅವರವರಿಗೆ ಆದಂತಹ ಒಳ್ಳೆಯ ಕಾರ್ಯಗಳನ್ನು ಮತ್ತು ದಾನ ದತ್ತಿಗಳನ್ನು ಕೊಡುತ್ತಿದ್ದಾರೆಂದು ತಿಳಿಯಬಹುದು. ಅಂತೆಯೇ ಇಂದಿನ ಕಾಲದಲ್ಲಿನ ಜನರು ಧಾರ್ಮಿಕ ದೇವಾಲಯಗಳಿಗೆ ಶಿಕ್ಷಣ ಸಂಸ್ಥೆಗಳೆಂದರೆ ಬ್ರಹ್ಮಪುರಿ, ಅಗ್ರಹಾರ, ಮಠಗಳಿಗೆ ದಾನ ನೀಡುವುದು ಮತ್ತು ಊರಿನ ಜನರಿಗೆ ಕೆರೆ, ಭಾವಿ, ನಿರ್ಮಿಸಿ ಸಾಮಾಜಿಕ ಸೇವೆಯನ್ನು ಮಾಡುತ್ತಿದ್ದರೆಂದು ಈ ಮೇಲಿನ ಶಾಸನಗಳಿಂದ ತಿಳಿಯಬಹುದಾಗಿದೆ.

## ೪.೨. ಶಿಕ್ಷಣ

ಪ್ರಾಚೀನ ಕಾಲದಿಂದಲೂ ನಮ್ಮ ನಾಡಿನಲ್ಲಿ ವಿದ್ಯಾಭ್ಯಾಸಕ್ಕೆ ಅತ್ಯಂತ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಹಿಂದೂ ಸಮಾಜವು ವಿಧ್ಯೆಯನ್ನು ತನ್ನ ಕರ್ತವ್ಯಗಳಲ್ಲೊಂದೆಂದು ಭಾವಿಸಿತ್ತು. ವಿಧ್ಯೆಯ ವಿಷಯದಲ್ಲಿ ಪ್ರಾಚೀನ ಭಾರತವು ಇಟ್ಟುಕೊಂಡಿದ್ದ ಅಭಿಪ್ರಾಯಗಳನ್ನು ಹೀಗೆ ಸಂಗ್ರಹಿಸಬಹುದು. ವಿದ್ಯೆಗಿಂತ ಶ್ರೇಷ್ಠವಾದುದು ಮತ್ತೊಂದಿಲ್ಲ. ಸರ್ವದ್ರವ್ಯಗಳಲ್ಲಿ ವಿದ್ಯೆಯೇ ನಿಜವಾದ ಧನ. ಏಕೆಂದರೆ ಅದನ್ನು ಯಾರು ಅಪಹರಿಸರು. ಅದು ಅನಾಗತ್ಯವಾದುದು ಮತ್ತು ಅಕ್ಷಯವಾದುದು. ವಿದ್ಯೆಯಿಂದ ಬರುವ ಸುಖವೇ ನಿಜವಾದ ಸುಖ. ಅದರ ಮೆಟ್ಟಿಲುಗಳನ್ನು ಹೀಗೆ ಗುರುತಿಸಬಹುದು. ವಿದ್ಯೆಯಿಂದ

ವಿನಯ, ವಿನಯದಿಂದ ಪಾತ್ರತೆ, ಪಾತ್ರತೆಯಿಂದ ಧನ, ಧನದಿಂದ ಧರ್ಮ, ಧರ್ಮದಿಂದ ಸುಖ. ವಿದ್ಯೆಯು ಕಲ್ಪಲತೆಯಂತೆ ಯಾವುದನ್ನು ತಾನೇ ಕೊಡುವುದಿಲ್ಲ. ಅದು ತಾಯಿಯಂತೆ ಕಾಪಾಡುತ್ತದೆ. ತಂದೆಯಂತೆ ಸರಿಯಾದ ಮಾರ್ಗದಲ್ಲಿ ನಿಯೋಜಿಸುತ್ತದೆ. ಪ್ರಿಯೆಯಂತೆ ಕಷ್ಟಗಳನ್ನು ಹೋಗಲಾಡಿಸಿ ಸಂತೋಷಪಡಿಸುತ್ತದೆ. ಐಶ್ವರ್ಯವನ್ನು ತರುತ್ತದೆ. ದಿಕ್ಕುಗಳಲ್ಲಿ ಕೀರ್ತಿಯನ್ನು ಹರಡುತ್ತದೆ. ವಿದ್ಯಾಹೀನನಾದವನು. ಒಂದು ಪಶುವಿಗೆ ಸಮಾನ. ಇಂದು ವಿದ್ಯೆಯ ವಿಷಯದಲ್ಲಿ ಇಷ್ಟೊಂದು ಆಸ್ಥೆ ವಹಿಸಿದ ದೇಶಗಳು ಬಹಳ ವಿರಳ.[೨೭] ಇದು ಅಂದಿನ ಕಾಲದಲ್ಲಿ ಶಿಕ್ಷಣಕ್ಕಿದ್ದ ಮಹತ್ವವನ್ನು ಸೂಚಿಸುತ್ತದೆ.

ಪ್ರಾಚೀನ ಕರ್ನಾಟಕ ವಿದ್ಯಾಭ್ಯಾಸದಲ್ಲಿ ಧಾರ್ಮಿಕ ಅಂಶಗಳಿಗೆ ಹೆಚ್ಚಿನ ಆದ್ಯತೆ ನೀಡಿದ್ದನ್ನು ಕಾಣುತ್ತೇವೆ. ಆಧ್ಯಾತ್ಮಿಕ ತಳಹದಿಯ ಮೇಲೆ ವಿದ್ಯೆಯು ಹೆಚ್ಚು ಅವಲಂಬಿತವಾಗಿದ್ದು ಅದು ಮಾನವನ ಬೌದ್ಧಿಕ ಶಕ್ತಿಯನ್ನು ರೂಪಿಸುವ ಒಂದು ಕಲೆಯಾಗಿತ್ತು. ಶಿಕ್ಷಣವು ವ್ಯಕ್ತಿಯ ವ್ಯಕ್ತಿತ್ವ ಮತ್ತು ಅಂತರ್ಗತ ಶಕ್ತಿ ಬೆಳಗಿ ಆತ್ಮೋದ್ಧಾರವನ್ನು ಸಾಧಿಸಲು ಅನುವುಗೊಳಿಸುವಂತೆ ಪ್ರೇರೇಪಿಸುವುದೇ ಆಗಿನೆ ಎಂದು ತಿಳಿಯಲಾಗಿತ್ತು. ಇದರಿಂದ ಅಂದಿನ ಕಾಲದಲ್ಲಿ ಧಾರ್ಮಿಕ ಶಿಕ್ಷಣವೇ ಸರ್ವಸ್ವವಾಗಿದ್ದಿದು ಸ್ಪಷ್ಟವಾಗುತ್ತದೆ.

ವಿದ್ಯೆಯ ಸಕಾರ ರೂಪಗಳಾಗಿ ಹುಟ್ಟಿಬಂದವು ವೇದ-ಉಪನಿಷತ್ತುಗಳು. ಸ್ತ್ರೀ-ಪುರುಷನ ಜ್ಞಾನಾರ್ಜನೆಗೆ ಸಮಾನ ತಳಹದಿಯನ್ನು ರೂಪಿಸಿಕೊಟ್ಟ ಕಾಲವದು. ಸ್ತ್ರೀಯರನ್ನು ಬ್ರಹ್ಮವಾದಿನಿಯರು ಮತ್ತು ಸಧೋವಧುಗಳೆಂಬ ಎರಡು ಭಾಗವಾಗಿ ವಿಂಗಡಿಸಲಾಗಿತ್ತು. ಬ್ರಹ್ಮವಾದಿನಿಯರು ಅಜನ್ಮಪರ್ಯಾತ ಬ್ರಹ್ಮಚಾರಿಣಿಯಾಗಿ ತಾತ್ವಿಕ ಸಾಹಿತ್ಯವನ್ನು ಕರಗತ ಮಾಡಿಕೊಂಡಿದ್ದಾರೆ. ಸದ್ಯೋವಧುಗಳು ವಿವಾಹ ಘಟ್ಟದವರೆಗೆ ವಿದ್ಯಾಭ್ಯಾಸವನ್ನು ಮುಂದುವರೆಸಿ ಮುಂದೆ ಗೃಹಜೀವನದಲ್ಲಿ ಕಾಲಿರಿಸುತ್ತಿದ್ದರು. ರಾಮಾಯಣ ಮಹಾಭಾರತಗಳ ಕಾಲಕ್ಕೆ ಕೌಸಲ್ಯೆ ತಾರೆಯರಂಥವರು 'ಮಂತ್ರವಿದ್ಯೆ' ಎಂಬ ವಿಶೇಷಣವನ್ನೇನೊ ಪಡೆದಿದ್ದರು. ಆದರೆ ಇಲ್ಲಿ ವಿದ್ಯೆಯ ಅವಕಾಶ ದೊರೆತದ್ದು ಕೇವಲ ಉನ್ನತವರ್ಗದವರಿಗೆ ಮಾತ್ರ. ಧರ್ಮಶಾಸ್ತ್ರಗಳ ಕಾಲಕ್ಕೆ ಬಂದರೆ ಈ ವ್ಯವಸ್ಥೆ ಸಂಪೂರ್ಣ ಅಸ್ತವ್ಯಸ್ತಗೊಂಡಿತು. ಈ ಪರಿಸ್ಥಿತಿ ಇತಿಹಾಸಗಳ ಕಾಲದವರೆಗೂ ಮುಂದುವರೆದು ಈ ಅವಧಿ ಸ್ತ್ರೀ ವಿಧ್ಯಾಭ್ಯಾಸದ ಪಾಲಿಗೆ ಒಂದು ಕತ್ತಲೆ ಯುಗವೆನಿಸಿಕೊಂಡಿತು.

ಬುದ್ಧನ ಕಾಲದಲ್ಲಿ ಸ್ತ್ರೀಯರಿಗೂ ದೀಕ್ಷೆ-ಮೋಕ್ಷಗಳು ಸುಲಭವಾಗಿ ದೊರಕಿದ್ದವು. ಇದರಿಂದ ಮಹಿಳಾ ಸಮಾಜದಲ್ಲಿ ಮುಕ್ತವಾತಾವರಣ ನಿರ್ಮಾಣಗೊಂಡು ಸರಳವಾದ ಅಧ್ಯಯನದ ಅಭಿರುಚಿಯತ್ತ

ಮನಸ್ಸು ಕೇಂದ್ರಿಕರಣಗೊಳ್ಳತೊಡಗಿತು. ಅನೇಕ ಸುಸಂಸ್ಕೃತ ಮಹಿಳೆಯರು ಭಿಕ್ಷುಣಿಯರಾಗಿ ಮತಪ್ರಚಾರಕರಾಗಿ ಕಾರ್ಯವನ್ನು ಕೈಗೊಂಡರು. ಬೌದ್ಧವಿಹಾರಗಳು ವಿದ್ಯಾಕೇಂದ್ರಗಳಾಗಿ ಈ ಕಾರ್ಯಗಳನ್ನು ನಿರ್ವಹಿಸತೊಡಗಿದರು. ತಕ್ಷಶಿಲಾ ಮತ್ತು ನಲಂದಗಳು ಈ ದಿಶೆಯಲ್ಲಿ ಪ್ರಮುಖ ಪಾತ್ರವಹಿಸಿದವು. ಬೌದ್ಧ ಧರ್ಮದಷ್ಟೇ ಮಹತ್ವಪೂರ್ಣವಾದುದ್ದು ಜೈನಧರ್ಮ ವಿದ್ಯಾಭ್ಯಾಸ ಕ್ಷೇತ್ರದಲ್ಲಿ ಬೌದ್ಧಧರ್ಮದ ಕಾರ್ಯ ಅಡಿಪಾಯ ಸ್ವರೂಪದ್ದಾದರೆ, ಜೈನಧರ್ಮದ ಕಾರ್ಯ ಅದರ ವಾಸ್ತು ರಚನೆಯೆನಿಸಿತು. ಬೌದ್ಧವಿಹಾರಗಳಂತೆ ಜೈನಬಸದಿಗಳು ವಿದ್ಯಾಭ್ಯಾಸದ ಕೇಂದ್ರಗಳಾಗಿದ್ದು ವಿದ್ಯಾಭ್ಯಾಸ ದೃಷ್ಟಿಯಿಂದ ಜೈನಸ್ತ್ರೀಯರ ಸಾಧನೆ ಮಹತ್ವವೆನಿಸಿದೆ.

ವಿದ್ಯಾಕೇಂದ್ರಗಳಾದ ಅಗ್ರಹಾರ, ಬ್ರಹ್ಮಪುರಿ, ಘಟಿಕಾಸ್ಥಾನ ಮತ್ತು ಶೈವಮಠಗಳು ಬೆಳೆದವು. ಅಗ್ರಹಾರಗಳು ಸಂಖ್ಯೆಯ ದೃಷ್ಟಿಯಿಂದ ಹೆಚ್ಚು ವ್ಯಾಪಕವಾದವು. ರಾಯಚೂರು ಜಿಲ್ಲೆಯಲ್ಲಿನ ಪ್ರಾಚೀನ ಅಗ್ರಹಾರಗಳು ಈ ಕೆಳಗಿನಂತಿವೆ.

| ಕ್ರ.ಸಂ. | ಅಗ್ರಹಾರಗಳು | ಕಾಲ ಕ್ರಿ.ಶ. |
|---|---|---|
| ೧. | ಹಿರಿಯ ಗಬ್ಬೂರು | ೧೧೭೧ |
| ೨. | ಗಬ್ಬೂರು | ೧೧೪೧ |
| ೩. | ಕರಡಿಕಲ್ಲು-೩೦೦ | ೧೦೪೬ |
| ೪. | ತಡೆಕಲ್ಲ | ೧೦೩೩ |
| ೫. | ಕೊಟ್ಟು ಕುಣುಹೆ | ೧೧೯೧ |
| ೬. | ರೂಡಿ | ೧೧೨೩ |
| ೭. | ರಾರಾವಿ | ೧೧೩೭ |
| ೮. | ಕಲ್ಲೂರು | ೧೦೮೦ |
| ೯. | ನಿಟ್ಟರವೆ | ೧೦೬೩ |
| ೧೦. | ಮುಕ್ಕುಂದಿ | ೧೧೭೫ |
| ೧೧. | ಬಳಗಾನೂರು | ೧೧೭೫ |
| ೧೨. | ದೆಲ್ವುಗೆ | ೯೧೮ |
| ೧೩. | ಬೆಳಗುರ್ಕಿ | ೯೯೨ |
| ೧೪. | ಪಿರಿಯ ಬೆಳ್ಳಹಾರ | ೧೧೧೭ |

ಅಗ್ರಹಾರಗಳು ಬ್ರಾಹ್ಮಣರ ನೆಲೆಗಳಾಗಿರುತ್ತಿದ್ದವಾದರೂ ಸಂಪೂರ್ಣವಾಗಿ ಬ್ರಾಹ್ಮಣರ ವಶಕ್ಕೊಳಪಟ್ಟಿರಲಿಲ್ಲ. ಬೇರೆ ಜನಾಂಗಗಳವರೂ ಇಲ್ಲಿ ಇದ್ದರು. ಆದರೆ ಬ್ರಾಹ್ಮಣರಿಗೆ ಮಾತ್ರ ಮೀಸಲಾಗಿ ಅಲ್ಲಿಯ ಉತ್ಪತ್ತಿಯಲ್ಲವೂ ಸಲ್ಲುತ್ತಿತ್ತು. ಇದರ ಮೂಲ ರೂಪ 'ಅಗ್ರಹಾರ' ಎಂದಿರಬೇಕೆಂದು, ಅದು ಅಗ್ರ+ಆಹಾರ ಎಂಬ ಎರಡು ಪದಗಳ ಸಮಾನವೆಂದೂ ಪ್ರೊ.ಡಿ.ಎಲ್.ನರಸಿಂಹಾಚಾರ್ಯರ ಅಭಿಪ್ರಾಯ. 'ಅಗ್ರ' ಎಂದರೆ ಶ್ರೇಷ್ಠ, ಆಹಾರ ಎಂದರೆ ದೇಶ ಅಥವಾ ಸ್ಥಳ ಎಂದರ್ಥ.[೨೮] ಅಗ್ರಹಾರಗಳು ವಿದ್ಯಾಕೇಂದ್ರಗಳಾಗಿ ನಿರಂತರ ಕೆಲಸ ನಿರ್ವಹಿಸುತ್ತಿದ್ದವು. ಗುರುಕುಲದಿಂದ ಹಿಂದಿರುಗಿ ಬಂದ ನಂತರ ಬ್ರಾಹ್ಮಣರು ಅಗ್ರಹಾರದಲ್ಲಿ ಮತ್ತೆ ತಮ್ಮ ವಿದ್ಯಾಭ್ಯಾಸವನ್ನು ಮುಂದುವರೆಸುತ್ತಿದ್ದರು. ದೇವಾಲಯದ ಪುರೋಹಿತರಿಗೆ, ವಿದ್ವಾಂಸರಿಗೆ ಭೂಮಿಯನ್ನು ದಾನವಾಗಿ ಬಿಡುತ್ತಿದ್ದರು. ಇಂತಹ ಭೂಮಿಯು ಅಗ್ರಹಾರ ಕೇಂದ್ರಗಳಾಗಿ ಪರಿಣಮಿಸಲ್ಪಟ್ಟಿದ್ದವು. ರಾಯಚೂರು ಜಿಲ್ಲೆಯಲ್ಲಿಯೂ ಅನೇಕ ಅಗ್ರಹಾರಗಳು ವಿದ್ಯಾಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ಈ ಜಿಲ್ಲೆಯ ಅಗ್ರಹಾರಗಳನ್ನು ಸರ್ವನಮಸ್ಯದಗ್ರಹಾರ, ಅಗ್ರಹಾರಗಳೆಂದು ಶಾಸನಗಳು ಕರೆದಿವೆ.

**ಗಬ್ಬೂರು :** ದೇವದುರ್ಗ ತಾಲೂಕಿಗೆ ಸೇರಿದ ಐತಿಹಾಸಿಕ ಮಹತ್ವ ಪಡೆದ ಗ್ರಾಮವಾಗಿದೆ. ಈಗ 'ದೇವದುರ್ಗ ತಾಲೂಕಿನಲ್ಲಿ ಒಂದು ಚಿಕ್ಕ ಹಳ್ಳಿಯಾಗಿರುವ ಗಬ್ಬೂರು ಹಿಂದೆ 'ಗೋಪುರಪುರ', 'ಗೋಪುರಗ್ರಾಮ'ಗಳೆಂಬ ಹೆಸರಿನಲ್ಲಿ ಪ್ರಸಿದ್ಧವಾದ ಅಗ್ರಹಾರವಾಗಿದ್ದಿತು. ಕ್ರಿ.ಶ.೧೧ನೆಯ ಶತಮಾನದಿಂದ ಕ್ರಿ.ಶ.೧೩ನೆಯ ಶತಮಾನಗಳ ನಡುವಣ ಅವಧಿಯಲ್ಲಿ ಇದೊಂದು ಹೆಸರಾದ ಅಗ್ರಹಾರವಾಗಿದ್ದಿತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ. ಈಗ ಗ್ರಾಮದಲ್ಲಿರುವ ಬಹುಸಂಖ್ಯಾತ ದೇವಾಲಯಗಳು ಶಿಲಾಶಾಸನಗಳು ಇದರ ಪ್ರಾಚೀನ ವೈಭವದ ಕುರುಹುಗಳಾಗಿವೆ.[೨೯] ಹಿರಿಯಗಬ್ಬೂರು ಎಂದು ಹೆಸರಾದ ಇದು ಅಯ್ಯಣವಾಡಿ-೩೦೦ರ ವಿಭಾಗಕ್ಕೆ ಸೇರಿತ್ತು. ಕ್ರಿ.ಶ.೧೦೮೫ರಲ್ಲಿ ದೊರೆತ ಮೇಲು ಶಂಕರದೇವಾಲಯದ ಮುಂದೆ ನಿಲ್ಲಿಸಿರುವ ಶಾಸನದಲ್ಲಿ ಗಬ್ಬೂರಿನ ಮಹಾಜನಗಳನ್ನು ಈ ರೀತಿ ವರ್ಣಿಸುತ್ತದೆ. "ಇವರು ವಿದ್ವಜ್ಜನ ಗಳು, ವಿಪ್ರಚೂಡಾಮಣಿಗಳು, ಮಹಾಜನಗಳು, ವಿದ್ವನ್‌ಮಣಿಗಳು ಎಂದು ವರ್ಣಿಸಿ ಇವರು ನೆಲೆಸಿರುವ ಈ ಗಬ್ಬೂರನ್ನು ವಿದ್ಯಾಕ್ಷೇತ್ರ, ವಿಬುಧ ಜನರು ನೆಲೆಸಿದ ಕ್ಷತ್ರ ಎಂದು ತಿಳಿಸುತ್ತದೆ. ಕ್ರಿ.ಶ.೧೧೯೦ರಲ್ಲಿ ದೊರೆತ ಶಾಸನದಲ್ಲಿ[೩೦] ಅಗ್ರಹಾರ ಗಬ್ಬೂರಿನ ಉಲ್ಲೇಖ ಬಂದಿದ್ದು, ಇಲ್ಲಿ ಹರಿಹಗ ಹಾಗೂ ಸಿದ್ಧಸೋಮೇಶ್ವರ ದೇವರ ಪೂಜೆ, ಪುನಸ್ಕಾರ, ಧೂಪ, ದೀಪ, ನೈವೇದ್ಯ, ವಸ್ತ್ರಾಲಂಕಾರಕ್ಕಾಗಿ ಲಕ್ಷುಮಕ್ಕ ಎಂಬುವವಳು ದಾನ ಬಿಟ್ಟಿದ್ದಂತೆ ತಿಳಿದು ಬರುತ್ತದೆ.

**ಕುರುಡಿ :** ಇಂದಿನ ಮಾನ್ವಿ ತಾಲೂಕಿಗೆ ಸೇರಿದ ಈ ಗ್ರಾಮವು ಹಿಂದೆ ಅಯ್ಯಣವಾಡಿ ೩೦೦ರ ವಿಭಾಗಕ್ಕೆ ಸೇರಿತ್ತು. ಈ ಗ್ರಾಮದ ಇನ್ನೊಂದು ಪ್ರಾಚೀನ ಹೆಸರು 'ರೂಢಿ'ಯಾಗಿದೆ. ಕ್ರಿ.ಶ.೧೧೨೩ರಲ್ಲಿ ದೊರೆತ

ಶಾಸನವು[೩೧] ರೂಢಿಯಲ್ಲಿ ನಿಂಬಣಯ್ಯನ ದಂಡನಾಯಕನು ಹಿಂದೆ ಚಂದ್ರಶೇಖರಭಟ್ಟರಿಗೆ ಕ್ರಮಕ್ಕೆ ನೀಡಿದ್ದ ಭೂಮಿಯಲ್ಲಿ ಅರ್ಧವನ್ನು ವಾಪಸ್ಸು ಪಡೆದು ಆ ಅರ್ಧ ಭೂಮಿಯನ್ನು ನಿಂಬಣೇಶ್ವರ ದೇವರ ಪೂಜೆ, ನೈವೇದ್ಯಕ್ಕೆ ಮತ್ತು ನಂದಾದೀವಿಗೆಗೆಂದು ದಾನ ನೀಡಿದ್ದನ್ನು ತಿಳಿಸುತ್ತದೆ. ಕುರುಡಿ ಗ್ರಾಮದ ಕ್ರಿ.ಶ.೧೧೧೯ರ ಶಾಸನವು ಕಾಶ್ಯಾಪಗೋತ್ರದ ವಾಸುದೇವನನ್ನು ಹೆಸರಿಸಿದೆ.[೩೨] ಈತನ ಮಗನಾದ ಮಧುಸೂದನನ್ನು ತನ್ನ ತಂದೆ ಹೆಸರಿನಲ್ಲಿ ವಾಸುದೇವ ದೇವಾಲಯವನ್ನು ಕಟ್ಟಿಸುತ್ತಾನೆ. ಇಲ್ಲಿ ೧೪ ಜನ ಮಹಾಜನರಿದ್ದಂತೆಯೂ, ತಿಳಿದುಬರುತ್ತದೆ. ಕ್ರಿ.ಶ.೧೧೩೪ರ ಶಾಸನದಂತೆ ಅಗ್ರಹಾರ ಕುರ್ಡಿಯ ಮಹಾಜನರಿಗೆ ಸೋಮಭಟ್ಟೋಪಾಧ್ಯಾಯದ ಮಕ್ಕಳಾದ ನಾರಾಯಣ ಭಟ್ಟೋಪಾಧ್ಯಾಯರು ತಿಂಗಳಿಗೆ ಹೊನ್ನ ಗದ್ಯಾಣವನ್ನು ದಾನ ನೀಡಿದಂತೆ ತಿಳಿಸುತ್ತದೆ.[೩೩]

**ಸಾಲಗುಂದೆ :** ಇದು ಎಡದೊರೆ ನಾಡಿನ ನಿಟ್ಟರವೆ-೭೦ಕ್ಕೆ ಸೇರಿದ ಅಗ್ರಹಾರವಾಗಿದೆ. ಕ್ರಿ.ಶ.೧೦೮೫ರ ಶಾಸನದಲ್ಲಿ ಇದರ ಉಲ್ಲೇಖ ಬಂದಿದ್ದು ಈ ನಾಡನ್ನು ನಾಗರಾಜ ಎಂಬುವವನು ಆಳುತ್ತಿದ್ದಂತೆ ಹೇಳಿದೆ.[೩೪] ಈತನ ಮಗ ನಾಗದೇವನು ನಾಗೇಶ್ವರ ದೇವಾಲಯ ಕಟ್ಟಿಸಿ ಈ ದೇವಾಲಯದ ನಿರ್ವಹಣೆಗಾಗಿ ತುಂಗಭದ್ರಾ ತೀರದಲ್ಲಿ ಮತ್ತರು ಭೂಮಿ, ಒಂದು ಗಾಣವನ್ನು ದಾನ ನೀಡುತ್ತಾನೆ. ಇಲ್ಲಿಯ ಮಹಾಜನರು ಹನ್ನೆರಡು ಮತ್ತರನ್ನು ೩೨ ಗೇಣ ಗಳೆಯಲ್ಲಿ ಅಳೆದು ದಾನ ನೀಡುತ್ತಾರೆ.[೩೫]

**ಮುಕ್ಕುಂದಿ :** ಮುಕ್ಕುಂದಿಯು ಸಿಂಧನೂರು ತಾಲೂಕಿಗೆ ಸೇರಿದ್ದಾಗಿದೆ. ಮುಕ್ಕುಂದಿಯಂತ ಊರಿಲ್ಲ, ಮುರಹರಿಯಂತ ದೇವರಿಲ್ಲ ಎಂಬ ಮಾತಿದೆ. ಇದು ನಿಟ್ಟರವೆ-೭೦ರ ಆಡಳಿತ ವಿಭಾಗಕ್ಕೆ ಸೇರಿದ್ದು, ಈ ಅಗ್ರಹಾರದಲ್ಲಿ ೩೦೦ ಮಹಾಜನರಿದ್ದಂತೆ ತಿಳಿದುಬರುತ್ತದೆ. ಇದು ಹಿಂದು ವರದರಾಜ ಅಮ್ಮಪುರವೆಂದೂ ಪ್ರಸಿದ್ಧಿ ಪಡೆದಿತ್ತು.[೩೬] ಕ್ರಿ.ಶ.೧೫೬೧ರ ಶಾಸನವು ಇದನ್ನು ಸರ್ವಮಾನ್ಯ ಅಗ್ರಹಾರವೆಂದು ಕರೆದಿದ್ದಂತೆ ತಿಳಿಸುತ್ತದೆ. ಇಲ್ಲಿ ನೆಲೆಸಿದ ಮಹಾಜನಗಳು ಸಾಗುವಳಿಗಾಗಿ ಭೂಮಿಯನ್ನು ವಾಮನಮುದ್ರೆಕಲ್ಲು ಹಾಕಿಸಿ ದಾನ ಬಿಟ್ಟಿದ್ದನ್ನು ಕಾಣುತ್ತೇವೆ.[೩೭] ಕ್ರಿ.ಶ.೧೨ನೇ ಶತಮಾನದ ಶಾಸನವು ಮುಕ್ಕುಂದೆಯಲ್ಲಿ ಕಟ್ಟಿಸಿದ ದೇವಾಲಯಕ್ಕೆ ಸೇನಬೋವ ಭಾವಣ್ಣಯ್ಯನು ಅಕ್ಷಯ ನಿಧಿಭಂಡಾರವನ್ನು ದಾನ ನೀಡಿದ್ದನ್ನು ತಿಳಿಸುತ್ತದೆ.[೩೮] ಕ್ರಿ.ಶ.೧೦೬೬ರಲ್ಲಿ ದೊರೆತ ಶಾಸನವು(೧೩) ಮುಕ್ಕುಂದೆಯನ್ನು ತ್ರಿಭೋಗ್ಯಾಭ್ಯಂತರವಾಗಿ ತ್ರೈಲೋಕ್ಯಮಲ್ಲನ ರಾಣಿ ತ್ರೈಲೋಕ್ಯ ಮಹಾದೇವಿ ಆಳುತ್ತಿದ್ದಂತೆ ಕಂಡುಬಂದಿದೆ.

**ತಡಕಲ್ಲು :** ಮಾನ್ವಿ ತಾಲೂಕಿಗೆ ಸೇರಿದ ತಡಕಲ್ ಗ್ರಾಮವು ಅಗ್ರಹಾರವಾಗಿದೆ. ಕ್ರಿ.ಶ.೧೦೩೩ರ ಶಾಸನವು ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲನು ಏತಗಿರಿಯ ನೆಲೆವೀಡಿನಿಂದ ರಾಜ್ಯಭಾರ ಮಾಡುತ್ತಿದ್ದಾಗ ಈತನ ರಾಣಿ ಬಿಜ್ಜಲದೇವಿಯು ಅಗ್ರಹಾರ ತಡಕಲ್ಲಿನ ದೇವಾಲಯವೊಂದಕ್ಕೆ ಭೂದಾನ ನೀಡಿದಂತೆ ತಿಳಿಸುತ್ತದೆ.[೩೯]

ಬಳಗಾನೂರ : ಸಿಂಧನೂರು ತಾಲೂಕಿಗೆ ಸೇರಿದ್ದ ಬಳಗಾನೂರು ಒಂದು ಅಗ್ರಹಾರವಾಗಿತ್ತು. ಕ್ರಿ.ಶ.೧೧೭೫ರ ಶಾಸನವು ಸಾರ್ವನಮಸ್ಯದ ಅಗ್ರಹಾರಕ್ಕೆ ನಖರರು ಮಾಧುಪಾಧ್ಯಾಯರು ಕೈಯಿಂದ ಕ್ರಯವಾಗಿ ಪಡೆದು ಅವನ ಚಿಕ್ಕಪ್ಪ ನಾಗವಿಷ್ಣುಪಾಧ್ಯಾಯರ ಮಗ ಮುದ್ದಣುಪಾಧ್ಯಾಯರ ಕೈಯಿಂದ ಕೆಲವು ವೃತ್ತಿಗಳನ್ನು ಕ್ರಯಕ್ಕೆ ಪಡೆದು ಮಹಾಜನಗಳ ಪಾದಪೂಜೆಯನ್ನು ಮಾಡಿ ಸರ್ವಭಾದಪರಿಹಾರವಾಗಿ ಅಗಸ್ತ್ಯ ದೇವರಿಗೆ ದಾನ ನೀಡುತ್ತಾರೆ.[೪೦] ಕ್ರಿ.ಶ.೧೧೧೩ರ ಲಕ್ಷ್ಮೀನಾರಾಯಣ ದೇವಾಲಯದ ಮಂಟಪಕ್ಕೆ ಸೇರಿಸಿರುವ ಶಾಸನದಲ್ಲಿ ಅಗ್ರಹಾರ ಬಳಗಾನೂರಿನಲ್ಲಿ ಮಹೇಶ್ವರ ಮತ್ತು ವಿರೂಪಾಕ್ಷಶೆಟ್ಟಿ ಕಟ್ಟಿಸಿದ ಲಕ್ಷ್ಮೀನಾರಾಯಣ ದೇವರ ದೇವಾಲಯಕ್ಕೆ ಮಹಾಮಂಡಳೇಶ್ವರ ಹೊಲ್ಲರಸನು ೧೪ ಮತ್ತರು ಭೂದಾನ ನೀಡಿದಂತೆ ತಿಳಿಸುತ್ತದೆ.[೪೧]

ಸಿಂಧೂನೂರಿನ ಅಗ್ರಹಾರವಾದ ಬಳಗಾನೂರಿನಲ್ಲಿ ದೊರೆತ ಕ್ರಿ.ಶ.೧೨೬೮ರ ಮತ್ತೊಂದು ಶಾಸನದಲ್ಲಿ ಶ್ರೀಮನ್ಮಹಾನಾಕಾಚಾರ್ಯ ಮತ್ತು ಅವರ ಬಂಧುಗಳು ಮತ್ತು ವಂಳಖಾನ ಅಜರತ್ ಅಲಿ ಸಾಹೇಬರು ಮುಂತಾದವರು ಬಳಗಾನೂರು ಸ್ಥಳದ ಎಲ್ಲಮ್ಮ ದೇವತೆಗೆ ದೂಪದೀಪಕ್ಕೆ ಎರೆ ಹೊಲವನ್ನು ದತ್ತಿಬಿಟ್ಟ ವಿಷಯವನ್ನು ಉಲ್ಲೇಖಿಸುತ್ತದೆ.[೪೨]



ಹೀಗೆ ರಾಯಚೂರು ಜಿಲ್ಲೆಯಲ್ಲಿ ದೊರೆತ ಅಗ್ರಹಾರಗಳು ಸಂಖ್ಯೆಯ ದೃಷ್ಟಿಯಿಂದ ಅಧಿಕವಾಗಿದ್ದು ವಿದ್ಯೆಗೆ ಹೆಚ್ಚಿನ ಆದ್ಯತೆ ನೀಡಿದ್ದನ್ನು ಸೂಚಿಸುತ್ತವೆ. ಪ್ರಾಚೀನ ಕಾಲದಲ್ಲಿದ್ದಂತೆ ಇಲ್ಲಿಯೂ ಅಗ್ರಹಾರಗಳು ಆತ್ಮೋದ್ಧಾರವನ್ನು ಬೆಳೆಸಿ ಸಮಾಜ ವ್ಯವಸ್ಥೆಯ ಕೇಂದ್ರಗಳಾಗಿ ನಿರಂತರ ಇವುಗಳಿಗೆ ದಾನ ಬಿಟ್ಟಿದ್ದಾರ ಕುರಿತು ಮಾಹಿತಿ ದೊರೆಯುತ್ತದೆ. ಅಲ್ಲದೆ ಇಲ್ಲಿ ನೆಲೆಸಿದ ಬ್ರಾಹ್ಮಣರಿಗೂ ಅರಸರು ಸೇರಿದಂತೆ ಸಾಮಾಂತರಸರು, ಮಾಂಡಳಿಕರು ದಾನ ಬಿಟ್ಟಿದ್ದನ್ನು ಕಾಣುತ್ತೇವೆ. ಕೆಲವು ವೇಳೆ ಗ್ರಾಮಗಳನ್ನು (ಅಗ್ರಹಾರ) ದಾನವಾಗಿ ಬಿಡಲಾಗುತ್ತಿತ್ತು. ಈ ಅಗ್ರಹಾರಗಳಲ್ಲಿ ನೆಲೆಸಿದ ಬ್ರಾಹ್ಮಣರನ್ನು ಮಹಾಜನಗಳೆಂದೇ ಕರೆಯಲಾಗುತ್ತಿತ್ತು. ಮಹಾಜನಗಳು ಅಗ್ರಹಾರಗಳ ಒಡೆಯರಾದರಿಂದ ಅವರಿಗೆ ಅಗ್ರಹಾರಗಳ ಮೇಲೆ ಒಂದು ರೀತಿಯ ಪ್ರಭುತ್ವವಿರುತ್ತಿತ್ತು. ಆದರೆ ಕನ್ನಡ ನಾಡಿನ ಅಗ್ರಹಾರಗಳಿಗಾಗಿ ಮಹಾಜನರು ಹೀಗೆ ಸಮಿತಿಗಳನ್ನು ರಚಿಸುತ್ತಿರಲಿಲ್ಲ. ಬಹುಶಃ ತಾವೇ ಸಾಮೂಹಿಕವಾಗಿ ಊರಿನ ಒಳ ಆಡಳಿತವನ್ನು ನಡೆಸಿಕೊಂಡು ಹೋಗುತ್ತಿದ್ದರು.[೪೩] ಏಕೆಂದರೆ ಅಗ್ರಹಾರಗಳಲ್ಲಿ ನೆಲೆಸಿದ ಮಹಾಜನರ ಸಂಖ್ಯೆ ನೋಡಿದರೆ ಈ ಮೇಲಿನ ಭಾವನೆ ಬರುತ್ತದೆ. ಅದೇ ರೀತಿಯಾಗಿ ಈ ಜಿಲ್ಲೆಯಲ್ಲಿಯೂ ಇನ್ನೂರು-ಮುನ್ನೂರು ಮುಂತಾದ ಸಂಖ್ಯೆಯಲ್ಲಿ ಮಹಾಜನರಿರುತ್ತಿದ್ದರೆಂದು ಇಲ್ಲಿಯ ಶಾಸನಗಳಿಂದ ತಿಳಿದುಬರುತ್ತದೆ.[೪೪]

ರಾಯಚೂರು ಜಿಲ್ಲೆಯ ಶಾಸನಗಳು ಮಹಾಜನರನ್ನು ಕುರಿತು ವಿದ್ವಜ್ಜನಗಳು ವಿಪ್ರಚೂಡಾಮಣಿಗಳು, ವಿದ್ವನ್‌ಮಣಿಗಳು, ದ್ವಿಜಗುರು ದೇವತಾ ಪೂಜಾತತ್ಪರರೂ, ಸಕಲಶಾಸ್ತ್ರ ವಿಶಾರದರೂ ಎಂದು ವರ್ಣಿಸಿದ್ದನ್ನು ಕಾಣುತ್ತೇವೆ. ವಿದ್ಯಾಕ್ಷೇತ್ರವನ್ನು ಹೊರತುಪಡಿಸಿಯೂ ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿಯೂ ಇವರು ಕಾರ್ಯ ನಿರ್ವಹಿಸುತ್ತಿದ್ದರು. ಇವರು ಹಲವಾರು ಧಾರ್ಮಿಕ ಆಚರಣೆಗಳಲ್ಲಿ ಪಾಲ್ಗೊಳ್ಳುತ್ತಿದ್ದರಲ್ಲದೆ ಅದಕ್ಕಾಗಿ ಹಣವನ್ನು ನೀಡಿದ್ದನ್ನು ಕಾಣುತ್ತೇವೆ. ಅಲ್ಲದೆ ದೇವಾಲಯಗಳಿಗೆ ದಾನ-ದತ್ತಿಗಳನ್ನು ನೀಡುತ್ತಿದ್ದರು. ಹಾಗೂ ಸಾರ್ವಜನಿಕರು ನೀಡುತ್ತಿದ್ದ ದಾನ-ದತ್ತಿಗಳಿಗೆ ಇವರು ಧರ್ಮದರ್ಶಿಗಳೂ ಆಗಿದ್ದರು. ಆದರೆ ಇವರ ಕುರಿತು ಇಲ್ಲಿ ದೊರೆತ ಶಾಸನಗಳು ಈ ಮೇಲಿನ ವಿವರಣೆ ನೀಡಿದ್ದಂತೆ ಅವರು ಅಂದಿನ ಅಗ್ರಹಾರಗಳಲ್ಲಿ ಯಾವ ಯಾವ ವಿಷಯಗಳ ಕುರಿತು ಶಿಕ್ಷಣವನ್ನು ನೀಡುತ್ತಿದ್ದರು ಎನ್ನುವುದರ ಕುರಿತು ಮಾಹಿತಿ ದೊರೆಯುವುದಿಲ್ಲ. ಆದಾಗ್ಯೂ ಇತರ ಅಗ್ರಹಾರಗಳಲ್ಲಿ ನಡೆಯುತ್ತಿದ್ದ ಅಧ್ಯಯನದ ವಿಷಯಗಳನ್ನೆ ಇಲ್ಲಿಯೂ ಕಲಿಸಲಾಗುತ್ತಿತ್ತೆಂದು ನಾವು ತಿಳಿಯಬಹುದು.

ಷಟ್ಕರ್ಮನಿರತರು ಎಂದು ಶಾಸನಗಳು ಬಣ್ಣಿಸುತ್ತವೆ. ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪರಿಗ್ರಹ ಇವೇ ಆ ಆರು ಕರ್ಮಗಳು; ಇವು ಪ್ರತಿಯೊಬ್ಬ ಬ್ರಾಹ್ಮಣನೂ ಮಾಡಲೇಬೇಕಾದ ವಿಧಿಗಳು. ಇವುಗಳಲ್ಲಿ ಅಧ್ಯಯನ ಎನ್ನುವುದು ಜ್ಞಾನಾರ್ಜನೆಯನ್ನು ಅಧ್ಯಾಪನ ಎನ್ನುವುದು ಜ್ಞಾನದಾನವನ್ನು ಸೂಚಿಸುತ್ತದೆ. ವೈದಿಕರು ತಮ್ಮ ವಿದ್ಯಾರ್ಥಿ ಜೀವನದಲ್ಲಿ ಕಲಿತಷ್ಟಕ್ಕೇ ತೃಪ್ತರಾಗದೆ, ಗೃಹಸ್ಥರಾದ ಮೇಲೂ ತಮ್ಮ ಅಭ್ಯಾಸವನ್ನು ಮುಂದುವರೆಸಬೇಕಾಗಿತ್ತು. ಇದೇ ಅಧ್ಯಯನ, ಅಧ್ಯಾಪನ ಎಂದರೆ ಪಾಠವನ್ನು ಬೋಧಿಸುವುದು ಎಂದರ್ಥ.[೪೫] ಇವುಗಳಲ್ಲದೆ ರಾಯಚೂರು ಜಿಲ್ಲೆಯಲ್ಲಿ ಇನ್ನೂ ಕೆಲವು ಅಗ್ರಹಾರಗಳಿದ್ದುದು ಶಾಸನಗಳಿಂದ ತಿಳಿದುಬರುತ್ತದೆ.

ಈ ಮೇಲೆ ತಿಳಿಸಿದ ರಾಯಚೂರು ಜಿಲ್ಲೆಯ ಅಗ್ರಹಾರಗಳನ್ನು ಗಮನಿಸಿದಾಗ ಮಹಾಜನರು ವಿದ್ಯೆ ಕಲಿಸುವುದಕ್ಕೆ ಹೆಚ್ಚಿನ ಮಹತ್ವ ಕೊಟ್ಟಿದ್ದರು ಎಂದು ತಿಳಿಸುತ್ತವೆ. ಇಲ್ಲಿಯ ಅಗ್ರಹಾರಗಳಲ್ಲಿಯ ಮಹಾಜನರು ವಿದ್ಯೆ ಕಲಿಸುವ ಸೋಮಭಟ್ಟೋಪಾಧ್ಯಾಯ[೪೬], ನಾರಾಯಣಭಟ್ಟೋಪಾಧ್ಯಾಯ[೪೭], ನಾಗವಿಷ್ಣುಪಾಧ್ಯಾಯ[೪೮], ಮುದ್ದಣೋಪಾಧ್ಯಾಯ[೪೯] ಆಗಿದ್ದರು ಎಂಬ ಬಗ್ಗೆ ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುತ್ತವೆ. ಮಹಾಜನಗಳಾಗಿದ್ದ ವಿಶೇಷಣಗಳನ್ನು ನೋಡಿದರೆ ಅದು ಅವರಲ್ಲಿದ್ದ ಜ್ಞಾನದ ದಿಗಂತತೆಯನ್ನು ತಿಳಿಸುತ್ತದೆ. ತಾವು ಕಲಿತ ಜ್ಞಾನವನ್ನು ಬೋಧಿಸಲು ಮಠ, ದೇವಾಲಯಗಳನ್ನು ಆಶ್ರಯಿಸುತ್ತಿದ್ದರು. ವೇದಶಾಸ್ತ್ರ, ನೀತಿಶಾಸ್ತ್ರ ಸಕಲಶಾಸ್ತ್ರ ಪರಿಣಿತರಾದ ಇವರಿಗೆ ಕಲ್ಯಾಣ ಚಾಲುಕ್ಯ ಅರಸರಾದ ಸತ್ಯಾಶ್ರಯ, ತ್ರೈಲೋಕ್ಯಮಲ್ಲ, ವಿಜಯನಗರದ ಅರಸರು ಹಾಗೂ ಮುಂತಾದ ಅರಸು

ಮನೆತನದವರು ಅಗ್ರಹಾರಗಳನ್ನು ನಿರ್ಮಿಸಿ ಇವರಿಗೆ ದಾನ ನೀಡುತ್ತಿದ್ದ ವಿಷಯ ಶಾಸನಗಳಿಂದ ತಿಳಿದುಬರುತ್ತದೆ. ಅರಸು ಮನೆತನದವರೊಂದಿಗೆ ಅಧಿಕಾರಿಗಳು ಕೆಲವು ವೇಳೆ ಗ್ರಾಮಗಳನ್ನು ಅಗ್ರಹಾರಗಳನ್ನಾಗಿ ಪರಿವರ್ತಿಸಿ ಅವುಗಳಿಗೆ ಅನೇಕ ದಾನ-ದತ್ತಿಗಳನ್ನು ನೀಡುತ್ತಿದ್ದರು. ಈ ದಾನ-ದತ್ತಿಗಳನ್ನು ಮಹಾಜನಗಳಿಗೂ ನೀಡುವ ಮೂಲಕ ಶಿಕ್ಷಣ ವ್ಯವಸ್ಥೆಗೆ ಆರ್ಥಿಕವಾಗಿ ಪ್ರಭಲತೆಯನ್ನು ನೀಡಲಾಗಿತ್ತು. ಅಗ್ರಹಾರಗಳು ಸಂಪೂರ್ಣವಾಗಿ ಮಹಾಜನಗಳ ಅಧೀನದಲ್ಲಿದ್ದು, ಯಾರೇ ದಾನ ಮಾಡಲು ಭೂಮಿಯನ್ನು ಪಡೆಯಬೇಕಾದರೆ ಇವರ ಅನುಮತಿಯನ್ನು ಕೇಳಬೇಕಾಗುತ್ತಿತ್ತು. ಇವರು ಅಗ್ರಹಾರಗಳ ಒಡೆಯರಾಗಿದ್ದು ಅಗ್ರಹಾರಗಳ ಒಡೆತನ ಅವರಿಗೆ ಸಂಬಂಧಿಸುತ್ತಿತ್ತು.

ಧರ್ಮ, ಕಲೆ, ಸಾಹಿತ್ಯದಲ್ಲಿ ಪಾರಂಗತರಾದ ಬ್ರಾಹ್ಮಣರಿಗೆ ದಾನ ನೀಡಿದ ಗ್ರಾಮಗಳೇ ಅಗ್ರಹಾರಗಳಾಗಿದ್ದವು. ಮಧ್ಯಕಾಲೀನ ಇತಿಹಾಸದಲ್ಲಿ ಪ್ರತಿಷ್ಠಾಪಿತವಾದ ಅಗ್ರಹಾರಗಳು ಈ ನಾಡಿನ ಸಮಾಜ ವ್ಯವಸ್ಥೆಯ ಮೇಲೆ ಗಮನಾರ್ಹವಾದ ಪರಿಣಾಮ ಬೀರಿವೆ ಎನ್ನಬಹುದು. ಇಲ್ಲಿ ವೇದ, ಆಗಮ, ವ್ಯಾಕರಣ, ಪುರಾಣ, ಶಾಸ್ತ್ರಗಳಲ್ಲಿ ಪರಿಣಿತರಾದ ವಿದ್ವಾಂಸರಿದ್ದರು. ಶಿಕ್ಷಣದ ಜೊತೆಗೆ ಧಾರ್ಮಿಕ ಚಟುವಟಿಕೆಗಳಲ್ಲಿ ಇವರೂ ಪಾಲ್ಗೊಳ್ಳುತ್ತಿದ್ದರು. ಅಗ್ರಹಾರದ ಎಲ್ಲಾ ಚಟುವಟಿಕೆಗಳು ಮಹಾಜನರ ಸಮ್ಮುಖದಲ್ಲಿ ನಡೆಯುತ್ತಿದ್ದರಿಂದ ಅದೊಂದು ಸ್ವಯಂಪೂರ್ಣ, ಸ್ವಾಯತ್ತತೆಯುಳ್ಳ ಸಂಸ್ಥೆಯಾಗಿತ್ತು. ಪ್ರಾಚೀನ ಕಾಲದಲ್ಲಿ ಅಗ್ರಹಾರಗಳು ಬ್ರಾಹ್ಮಣರ ಕೇಂದ್ರ ಸಂಸ್ಥೆಗಳೆನಿಸಿದ್ದವು. ಬ್ರಾಹ್ಮಣರೊಂದಿಗೆ ಇಲ್ಲಿ ಅನ್ಯಜಾತಿಯವರು ವಾಸಿಸುತ್ತಿದ್ದರು. ಅಗ್ರಹಾರಗಳ ಸಂಪೂರ್ಣ ಆದಾಯ ಬ್ರಾಹ್ಮಣರ ವರ್ಗಕ್ಕೆ ಸೇರುತ್ತಿತ್ತು. ಹೀಗಾಗಿ ಅಗ್ರಹಾರಗಳು ಒಂದು ದೃಷ್ಟಿಯಿಂದ ವೈದಿಕ ಧರ್ಮದ ಬೀಡುಗಳೂ ಆಗಿದ್ದವು. ಇಲ್ಲಿಯ ಮಹಾಜನರ ಅನುಕೂಲತೆಗೆ ರಾಣಿಯರು ದಾನ ದತ್ತಿಗಳನ್ನು ಬಿಟ್ಟುಕೊಟ್ಟಿದ್ದರು.[೫೦]

ಅರಸು ಮನೆತನಗಳ ಅವಧಿಯಲ್ಲಿ ವಿಸ್ತಾರವಾಗಿ ಬೆಳೆದ ಅಗ್ರಹಾರಗಳು ದೇವಾಲಯಗಳ ನಿರ್ಮಾಣದ ಮೂಲಕ ಅಂದಿನ ಶೈಕ್ಷಣಿಕ ಕ್ಷೇತ್ರದಲ್ಲಿ ಬಹುಮುಖ ಬೆಳವಣಿಗೆಗೆ ಮುಖ್ಯ ಕಾರಣಗಳಾಗಿದ್ದವು. ದೇವಾಲಯ, ಮಠಗಳಲ್ಲಿದ್ದ ಪುರೋಹಿತರು. ಆಚಾರ್ಯರು, ಅಂದಿನ ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ನೀಡುತ್ತಿದ್ದರ ಜೊತೆಗೆ ಧಾರ್ಮಿಕ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡುತ್ತಿದ್ದರು. ವಿದ್ಯಾಭ್ಯಾಸದ ನೆರವಿಗಾಗಿಯೂ ದೇವಾಲಯಗಳಿಗೆ ದಾನವನ್ನು ನೀಡುತ್ತಿದ್ದುದುಂಟು.

ಹೀಗೆ ಪ್ರಾಚೀನ ಕಾಲದಲ್ಲಿ ಅಗ್ರಹಾರಗಳು ಮುಖ್ಯವಾಗಿ ಶಿಕ್ಷಣ ಸಂಸ್ಥೆಗಳಾಗಿ ಪ್ರಬಲವಾಗಿದ್ದವು. ರಾಜರಿಂದ ಹಿಡಿದು ಮಂತ್ರಿಗಳು ಹಾಗೂ ಇತರ ಅಧಿಕಾರಿಗಳು ದಾನ-ದಿತ್ತಿಗಳನ್ನು ನೀಡುತ್ತಿದ್ದರು.

ಬ್ರಾಹ್ಮಣರಿಗೆ ಭೂದಾನ ಹಾಗೂ ಇತರ ದಾನಗಳನ್ನು ನೀಡಿ ಪುಣ್ಯ ಸಂಪಾದಿಸುವ ಉದ್ದೇಶ ಅವರದಾಗಿತ್ತು. ಪ್ರಾಚೀನ ಕಾಲದಲ್ಲಿ ರಾಜ್ಯವೂ ವಿದ್ಯಾಭ್ಯಾಸದ ಹೊಣೆಯನ್ನು ಪ್ರತ್ಯಕ್ಷವಾಗಿ ವಹಿಸಿದ್ದರೂ, ಅಗ್ರಹಾರಗಳನ್ನು ಸ್ಥಾಪಿಸುವುದರ ಮೂಲಕ ಪರೋಕ್ಷವಾಗಿ ಸಹಾಯ ಮಾಡಿದೆ ಎನ್ನಬಹುದು. ಹೊಟ್ಟೆ-ಬಟ್ಟೆಗಳ ಚಿಂತೆಯನ್ನು ರಾಜ್ಯವು ಹೋಗಲಾಡಿಸಿದುದರಿಂದ ಅಗ್ರಹಾರಗಳು ಬ್ರಾಹ್ಮಣರು ತಮ್ಮ ಸಂಪೂರ್ಣ ಗಮನವನ್ನು ವಿದ್ಯಾದಾನದ ಕಡೆಗೆ ಕೊಡಲು ಸಾಧ್ಯವಾಯಿತು.[೯೦] ಅಗ್ರಹಾರಗಳ ಆಧಾಯವೆಲ್ಲವೂ ಬ್ರಾಹ್ಮಣರಿಗೆ ಸಲ್ಲುತ್ತಿದ್ದರಿಂದ ಅವರಿಗೆ ಜೀವನೋಪಾಯಕ್ಕೆ ಚಿಂತೆ ಇರಲಿಲ್ಲ. ಇದರಿಂದಾಗಿ ಶಿಕ್ಷಣದ ಚಟುವಟಿಕೆಗಳಲ್ಲಿ ಸಂಪೂರ್ಣವಾಗಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು.

**ಬ್ರಹ್ಮಪುರಿ :** ರಾಯಚೂರು ಜಿಲ್ಲಾ ಶಾಸನಗಳಲ್ಲಿ ದೊರೆತ ಬ್ರಹ್ಮಪುರಿಗಳ ಪಟ್ಟಿ ಈ ಕೆಳಗಿನಂತಿದೆ.

| ಕ್ರ.ಸಂ. | ಬ್ರಹ್ಮಪುರಿ | ಕಾಲ(ಕ್ರಿ.ಶ) | ಶಾಸನಸಂಖ್ಯೆ | ಉಲ್ಲೇಖ |
|---|---|---|---|---|
| ೧. | ಬ್ರಹ್ಮಪುರಿ | ೧೧೪೪ | ದೇ.೧೩, | ಗಬ್ಬೂರು |
| ೨. | ಬ್ರಹ್ಮಪುರಿ | ೧೦೭೯ | ಲಿಂಗ-೪ | ಕರಡ್ಕಲ್ |
| ೩. | ಬ್ರಹ್ಮಪುರಿ | ೧೨೧೫ | ಲಿಂಗ-೪೯, | ಮುದುಗಲ್ |
| ೪. | ಬ್ರಹ್ಮಪುರಿ | ೧೧೦೬ | ಮಾನ್ವಿ-೮೦, | ಬಲ್ಲಟಗಿ |

ನಗರಗಳಲ್ಲಿ ಅಥವಾ ಪಟ್ಟಣಗಳಲ್ಲಿ ಬ್ರಾಹ್ಮಣ ವಿದ್ವಾಂಸರು ವಾಸಿಸುವ ಭಾಗವೇ ಬ್ರಹ್ಮಪುರಿ.(೨೭) ಅಗ್ರಹಾರಗಳು ಊರುಗಳಾದರೆ ಬ್ರಹ್ಮಪುರಿಗಳು ಪಟ್ಟಣಗಳ ಭಾಗಗಳು. ಅಗ್ರಹಾರಗಳಿಗಿಂತ ಬ್ರಹ್ಮಪುರಿಗಳ ಸಂಖ್ಯೆ ಕಡಿಮೆ.[೯೨] ಏಕೆಂದರೆ ಪ್ರಾಚೀನ ಕರ್ನಾಟಕದಲ್ಲಿ ಹಳ್ಳಿಗಳ ಸಂಖ್ಯೆ ಹೆಚ್ಚು, ನಗರಗಳ ಸಂಖ್ಯೆ ಕಡಿಮೆ, ವಿದ್ಯಾಭ್ಯಾಸದ ವಿಷಯದಲ್ಲಿ ಬ್ರಹ್ಮಪುರಿಗಳು ಯಾವ ವಿಶೇಷತೆಯನ್ನು ತೋರಿರುವುದಿಲ್ಲ. ಬ್ರಹ್ಮಪುರಿಗಳನ್ನು ಕುರಿತು ಈ ಜಿಲ್ಲೆಯಲ್ಲಿ ಕೆಲಶಾಸನಗಳಲ್ಲಿ ಮಾತ್ರ ಉಲ್ಲೇಖ ಬಂದಿದೆ.

ಅಗ್ರಹಾರ ವಿದ್ಯಾವಂತ ಬ್ರಾಹ್ಮರಿಗೆ ಮಾತ್ರ ಮೀಸಲಾಗಿ ವಿದ್ಯಾಭ್ಯಾಸದ ಕೇಂದ್ರವಾಗಿರುತ್ತಿತ್ತು. ಅಂತಹ ಅಗ್ರಹಾರಗಳಲ್ಲಿ ಬ್ರಾಹ್ಮಣರ ಒಂದು ನಗರ ಬೇರೆ ಇರುತ್ತಿತ್ತು. ಅಂತಹವುಗಳಿಗೆ ಬ್ರಹ್ಮಪುರಿಗಳೆಂದು ಕರೆಯುತ್ತಿದ್ದರು. ಬ್ರಹ್ಮಪುರಿಯ ಬ್ರಾಹ್ಮಣರಿಗೂ ಕೂಡ ಅಗ್ರಹಾರದ ಬ್ರಾಹ್ಮಣರಿಗೆ ನೀಡಿದಂತೆ ದಾನ ಕೊಡುವ ಪದ್ಧತಿಯು ಇತ್ತು. ಮಾನ್ವಿಯಲ್ಲಿ ದೊರೆತ ಕ್ರಿ.ಶ.೧೧೦೬ರ ಬಲ್ಲಟಗಿಯ ಶಾಸನವು(೨೯) ಚಂದಲದೇವಿಯು ಬ್ರಹ್ಮಪುರಿಯ ಹೊಲಿಮಯ್ಯ ಹಾಗೂ ಮಲ್ಲಯ್ಯನಿಗೆ ಬಳ್ಳನಿಟ್ಟಿಗೆಯಲ್ಲಿ ಭೂಮಿ ಹಾಗೂ ನಿವೇಶನವನ್ನು ದಾನವಾಗಿ ಕೊಟ್ಟಿದ್ದನ್ನು ತಿಳಿಸುತ್ತದೆ.[೯೩]

ಭತ್ತಗ್ರಾಮ : ರಾಯಚೂರು ಜಿಲ್ಲೆಯ ಶಾಸನಗಳಲ್ಲಿ ದೊರೆತ ಭತ್ತಗ್ರಾಮಗಳ ಸಂಕ್ಷಿಪ್ತ ಪರಿಚಯ

| ಕ್ರ.ಸಂ. | ಭತ್ತಗ್ರಾಮ | ಕಾಲ(ಕ್ರಿ.ಶ) | ಶಾಸನ ಸಂಖ್ಯೆ | ಉಲ್ಲೇಖ |
|---|---|---|---|---|
| ೧. | ಭತ್ತಗ್ರಾಮ | ೧೧೨೪ | ಲಿಂಗ-೧, | ಲಿಂಗಸೂಗೂರು |
| ೨. | ಭತ್ತಗ್ರಾಮ | ೧೦೬೯ | ಮಾನ್ವಿ-೫೫ | ಕಪಗಲ್ಲು |
| ೩. | ,, | ಉಲ್ಲೇಖವಿಲ್ಲ | ಮಾನ್ವಿ-೫೬ | ಬೇನೂರು |
| ೪. | ,, | ೧೦೨೮ | ಮಾನ್ವಿ-೮೧ | ಬಲ್ಲಟಗಿ |
| ೫. | ,, | ೧೦೨೯ | ಮಾನ್ವಿ-೮೭ | ,, |
| ೬. | ,, | ೧೦೩೧ | ಮಾನ್ವಿ-೯೧ | ,, |
| ೭. | ,, | ೧೦೩೬ | ಮಾನ್ವಿ-೯೨ | ,, |
| ೮. | ,, | ೧೦೫೮ | ಮಾನ್ವಿ-೯೫ | |
| ೯. | ,, | ೧೦೩೬ | ಮಾಕ-೧೦೦ | ನುಗಡೋಣಿ |

ಅತೀ ಪ್ರಾಚೀನ ಭಾರತದ ಶಿಕ್ಷಣ ಕ್ಷೇತ್ರಗಳಲ್ಲಿ ಅಗ್ರಹಾರ ಹಾಗೂ ಬ್ರಹ್ಮಪುರಿಗಳಂತೆ ಭತ್ತಗ್ರಾಮಗಳು ಕೂಡ ಧಾರ್ಮಿಕ ಶಿಕ್ಷಣವನ್ನು ನೀಡುತ್ತಿದ್ದವು. ಶಾಸನಗಳಲ್ಲಿನ 'ಭತ್ತಗ್ರಾಮ' ಉಲ್ಲೇಖಗಳನ್ನು ಗಮನಿಸಿದ ಡಾ.ಪಿ.ಬಿ.ದೇಸಾಯಿ ಅವರು ಸಂಸ್ಕೃತದ 'ಭಜ್ '(To obtain as one's Share enjoy to all of) ಧಾತುವಿನ ಭೂತಶೂನ್ಯ ರೂಪವಾದ 'ಭಕ್ತ' ಎಂಬುದು ಮುಂದೆ 'ಭತ್ತ' ಎಂದಾಗಿದ್ದು ಭತ್ತ ಗ್ರಾಮವೆಂದರೆ ಸ್ವಂತ ಅಥವಾ ಉಪಯೋಗಕ್ಕೆ ಪಡೆದ ಗ್ರಾಮ. ಅಂದರೆ ಈಗಿನ ಅರ್ಥದಲ್ಲಿ ಇನಾಮು ಅಥವಾ ಜಹಗೀರು ಗ್ರಾಮ ಎಂದಿದ್ದಾರೆ.[೬೪]

ಡಾ. ಕಲಬುರ್ಗಿಯವರು ಹೇಳುವ 'ಕುಲಭೇದವಿಲ್ಲದೆ ಯಾರೊಬ್ಬರ ಉಪಭೋಗಕ್ಕೆ ಕೊಟ್ಟ ಗ್ರಾಮ' ಎಂಬ ಮಾತು ಮತ್ತು ಡಾ.ದೇಸಾಯಿಯವರು ಹೇಳುವ ವ್ಯಕ್ತಿಯೊಬ್ಬ ಸ್ವಂತ ಉಪಭೋಗಕ್ಕೆ ಪಡೆದ ಇನಾಮು; "ಜಹಗೀರು ಗ್ರಾಮ" ಎನ್ನುವ ಅರ್ಥವನ್ನು ಕೈಬಿಟ್ಟು ಅದು ಬ್ರಾಹ್ಮಣರ ಉಪಭೋಗಕ್ಕೆ ಕೊಟ್ಟಿರುವ ಊರು. ಅಗ್ರಹಾರಕ್ಕೆ ಇನ್ನೊಂದು ಹೆಸರೆಂದು ಹೇಳಬೇಕಾಗುತ್ತದೆ[೬೫] ಎಂದು ಎಸ್.ಕೆ.ಕೊಪ್ಪ ಅವರು ಇವರಿಬ್ಬರ ಅಭಿಪ್ರಾಯಕ್ಕೆ ವ್ಯತಿರಿಕ್ತವಾಗಿ ವಿವರಣೆ ನೀಡಿರುತ್ತಾರೆ.

ಅಗ್ರಹಾರ ಮತ್ತು ಭತ್ತಗ್ರಾಮಗಳಲ್ಲಿ ಹೆಚ್ಚಿನ ವ್ಯತ್ಯಾಸವಿರಲಿಲ್ಲ. ವಿದ್ಯಾಭ್ಯಾಸದ ವಿಷಯದಲ್ಲಿ ಅಗ್ರಹಾರಗಳು ತೋರಿದ ಹೆಚ್ಚಿನ ವಿಶೇಷತೆಯನ್ನು ಈ ಜಿಲ್ಲೆಯ ಭತ್ತಗ್ರಾಮಗಳು ತೋರಿಸುವುದಿಲ್ಲ.

ಆದರೂ ಇಲ್ಲಿ ಭತ್ತಗ್ರಾಮಗಳಿಗೆ ರಾಜ-ರಾಣಿಯರು ಹಾಗೂ ಸಾಮಂತ, ದಂಡಾಧಿಕಾರಿಗಳು ದಾನ ನೀಡಿದ್ದನ್ನು ಶಾಸನಗಳು ತಿಳಿಸುತ್ತವೆ.

ಮಾನ್ವಿ ತಾಲೂಕಿನಲ್ಲಿ ದೊರೆತ ಬಲ್ಲಟಗಿಯ ಶಾಸನವು ಅರಸ ಜಗದೇಕಮಲ್ಲನ ರಾಣಿ ಸೋಮಲದೇವಿಯು ಎಡೆದೊರೆ-೨೦೦೦ ನಾಡಿನ ಭತ್ತಗ್ರಾಮವಾದ ಬಳ್ಳನಿಟ್ಟಿಗೆಯ ಬಸದಿಗೆ ೨೪ ಮತ್ತರು ಕರಿಯ ನೆಲ. ಒಂದು ಮತ್ತರು ತೋಟ. ಐದು ಮನೆ, ಒಂದು ಗಾಣವನ್ನು ದಾನವಾಗಿ ಕೊಟ್ಟಿದ್ದನ್ನು ತಿಳಿಸುತ್ತದೆ.[೫೬] ಕ್ರಿ.ಶ.೧೦೩೧ರ ಮಾನ್ವಿಯ ಬಲ್ಲಟಗಿಯು ಶಾಸನದಲ್ಲಿ ಚಾಳುಕ್ಯ ಅರಸ ಜಯಸಿಂಹನ ರಾಣಿ ಸೋಮಲದೇವಿಯು ಭತ್ತಗ್ರಾಮ ಬಳ್ಳನಿಟ್ಟಿಗೆಯಲ್ಲಿ ಪಿರಿಯ ಕೊಲಲ್ಲಿ ನೂರು ಮತ್ತರು ಭೂಮಿಯನ್ನು ದಾನವಾಗಿ ನೀಡಿದಂತೆ ತಿಳಿದುಬರುತ್ತದೆ.[೫೭] ಬಲ್ಲಟಗಿಯಲ್ಲಿ ದೊರೆತ ಮತ್ತೊಂದು(ಮಾನ್ವಿಯ ಕ್ರಿ.ಶ.೧೦೩೬) ಶಾಸನದಲ್ಲಿ ೩೪ ಚಾಳುಕ್ಯ ಎರಡನೆಯ ಜಯಸಿಂಹನು ಮೊಸಳೆಕಲ್ಲು-೩೦೦ರ ಭತ್ತಗ್ರಾಮವಾದ ಬಲ್ಲಟಗಿಯ ಚಂದೇಶ್ವರ ದೇವಾಲಯಕ್ಕೆ ದಾನ ಬಿಟ್ಟಂತೆ ತಿಳಿದುಬರುತ್ತವೆ.[೫೮] ತ್ರೈಲೋಕ್ಯಮಲ್ಲನ ಸೋಮೇಶ್ವರನ ರಾಣಿ ಚಮಲದೇವಿಯು ತುಂಗಭದ್ರ ಹಾಗೂ ಕೃಷ್ಣ ನದಿಯ ಸಂಗಮದಲ್ಲಿ ಸ್ನಾನ ಮಾಡಿದ ನೆನಪಿಗಾಗಿ ಎಡೆದೊರೆ-೨೦೦೦ದಲ್ಲಿಯ ಮೊಸಳಿಕಲ್ಲು-೩೦೦ರ ಭತ್ತಗ್ರಾಮ ಬಲ್ಲಟಗಿಯಲ್ಲಿ ದಾನ ಬಿಟ್ಟ ವಿಷಯವನ್ನು ಮಾನ್ವಿ ತಾಲೂಕಿನ ಬಲ್ಲಟಗಿಯ ಶಾಸನದಿಂದ(ಕ್ರಿ.ಶ.೧೦೫೮)ತಿಳಿದುಬರುತ್ತದೆ.[೫೯]

**ಘಟಿಕಾಲಯ :** ಶಿಕ್ಷಣ ಸಂಸ್ಥೆಗಳಲ್ಲಿ ಅಗ್ರಹಾರ, ಬ್ರಹ್ಮಪುರಿ, ಭತ್ತ ಗ್ರಾಮಗಳಂತೆ ಘಟಿಕಾಸ್ಥಾನಗಳು ಪ್ರಮುಖವಾಗಿವೆ. 'ಘಟಿಕ' ಎನ್ನುವುದು ವಿದ್ಯೆಯ ಮತ್ತು ಧರ್ಮದ ಕೇಂದ್ರವಾಗಿತ್ತು. ಹಾಗೂ ಅದು ಚಿಕ್ಕದಾಗಿತ್ತು ಎಂದು ರಾಧಾಕುಮುದ ಮುಖಜಿರಯವರು ಅಭಿಪ್ರಾಯ ಪಟ್ಟಿದ್ದಾರೆ.[೬೦]

ಘಟಿಕಾಸ್ಥಾನಗಳಲ್ಲಿ ಪಂಡಿತರು, ಗ್ರಂಥಪಾಲಕರು, ಘಟಿಕಾ ಪ್ರಹಾರಿಗಳು ಮತ್ತು ಅನೇಕ ವಿದ್ಯಾರ್ಥಿಗಳಿರುತ್ತಿದ್ದರು. ಘಟಿಕಾಲಯಕ್ಕೆ ನಿರ್ದಿಷ್ಟವಾದ ಅರ್ಥವನ್ನು ಕೊಡಲಿಕ್ಕಾಗದು. ವಿವಿಧ ವಿದ್ವಾಂಸರು ಅಭಿಪ್ರಾಯ ಪಡುವಂತೆ ಶ್ರೀ ಕೆ.ಬಿ.ಪಾಠಕ್‌ರು ಘಟಿಕಾಸ್ಥಾನ ಎಂದರೆ 'ಧಾರ್ಮಿಕ ಕೇಂದ್ರ' ಎಂದು ಅನುವಾದಿಸಿದ್ದಾರೆ. "ರೈಸ್ ಅವರು ಬ್ರಾಹ್ಮಣರು ಒಂದೆಡೆ ಸೇರುತ್ತಿದ್ದ ಸಾರ್ವಜನಿಕ ಮಂದಿರವಿರಬಹುದು" ಎಂದಿದ್ದಾರೆ.[೬೧] ಪ್ರೊ.ಎಸ್.ವಿ.ವೆಂಕಟೇಶ್ವರ ಅವರು ಘಟಿಕಾಸ್ಥಾನವನ್ನು ಹೀಗೆ ವಿವರಿಸಿದ್ದಾರೆ. ಉಪಾಧ್ಯಾಯರು, ವಿದ್ಯಾರ್ಥಿಗಳು ಕೂಡಿ ಚರ್ಚೆ ನಡೆಸುತ್ತಿದ್ದ ಮತ್ತು ಮಹಾವಿದ್ವಾಂಸರ ಸಂಪರ್ಕದಿಂದ ಧಾರ್ಮಿಕ ಸಾಹಿತ್ಯದಲ್ಲಿ ಅತ್ಯುತ್ತಮ ಜ್ಞಾನವನ್ನು ಪಡೆಯಲು ಸಾಧ್ಯವಾಗಿದ್ದ ಶ್ರೇಷ್ಠತಮ ಸಂಸ್ಥೆಯೇ ಘಟಿಕಾಸ್ಥಾನ. ಅಲ್ಲಿಯ ವಿದ್ಯಾಭ್ಯಾಸದ ಮಟ್ಟ ಎಷ್ಟು ದೊಡ್ಡದಾಗಿತ್ತೆಂದರೆ ಅಧ್ಯಯನವನ್ನೆಲ್ಲ

ಮುಗಿಸಿದ ವಿದ್ವಾಂಸರು ಕೂಡ ವಿನಯದಿಂದ ಆ ಸಂಸ್ಥೆಯನ್ನು ಸಮೀಪಿಸಿ ಜ್ಞಾನದ ತುಣುಕುಗಳನ್ನು ಆರಿಸಿಕೊಳ್ಳಬೇಕಾಗಿತ್ತು ಎಂದು ವಿವರಿಸಿದ್ದಾರೆ.[೬೨]

**ದೇವಸ್ಥಾನ ಮಠ :** ಪ್ರಾಚೀನ ಕರ್ನಾಟಕದಲ್ಲಿ ದೇವಸ್ಥಾನಗಳು ಶೈವಯತಿಗಳ ವಾಸಸ್ಥಾನಗಳು ಆಗಿದ್ದವು. ದೇವಸ್ಥಾನಗಳಲ್ಲಿ ನೆಲೆಯಾಗಿ ನಿಂತ ಯತಿಗಳು ಮಹಾವಿದ್ವಾಂಸರು ಆಗಿದ್ದುದರಿಂದ ವೈಯಕ್ತಿಕವಾದ ತಪಃ ಕರ್ಮದ ಜೊತೆಯಲ್ಲಿಯೇ ವಿದ್ಯಾದಾನವನ್ನು ಕೈಗೊಂಡರು. ಭಕ್ತರು ದೇವಸ್ಥಾನಗಳ ಪೂಜಾದಿಗಳಿಗೆ ದತ್ತಿಗಳನ್ನು ಬಿಟ್ಟುಕೊಡುವಾಗ ವಿದ್ಯಾಭ್ಯಾಸಕ್ಕಾಗಿಯೂ ದತ್ತಿಗಳನ್ನು ಕೊಡಲಾರಂಭಿಸಿದರು. ಹೀಗೆ ದೇವಸ್ಥಾನವು ವಿದ್ಯಾಕೇಂದ್ರವಾಗಿ ಪರಿಣಮಿಸಿದ್ದು ಬಹುಶಃ ಎಂಟು ಅಥವಾ ಒಂಭತ್ತನೆಯ ಶತಮಾನಗಳ ಬಳಿಕ ಜೈನರ ಬಸದಿಗಳನ್ನೂ, ಬೌದ್ಧರ ವಿಹಾರಗಳನ್ನು ಗಮನಕ್ಕೆ ತೆಗೆದುಕೊಂಡು ಇನ್ನೂ ಬಹು ಹಿಂದಕ್ಕೆ ಹೋಗುತ್ತದೆ. ಏಕೆಂದರೆ ಆರಂಭದಿಂದಲೂ ಜೈನರ ಬಸದಿಗಳು ದೇವಸ್ಥಾನಗಳು ಹೌದು, ಯತಿಗಳ ವಾಸಸ್ಥಾನಗಳೂ ಹೌದು.[೬೩]

ಕ್ರಿ.ಶ.೧೦೨೭ರ ಶಾಸನವು ಬೆಸವೋಜ ಜಿ. ಎಂಬುವವನು ಕಟ್ಟಿದ ಬಸದಿಯ ಭೋಗಕ್ಕೆ ಐವತ್ತು ಮತ್ತರು ಭೂಮಿ ಮತ್ತು ಅಕಡಿ ಮತ್ತರು ಐವತ್ತನ್ನು ಹಾಗೂ ದೀಪಕ್ಕೆ ಒಂದು ಗಾಣ. ಹೂವಿನ ತೋಟವೊಂದನ್ನು ಚಾಳುಕ್ಯ ಜಗದೇಕಮಲ್ಲನ ಮಗಳು ದಾನ ನೀಡಿದಂತೆ ಹೇಳುತ್ತದೆ. ಮಾನ್ವಿಯಲ್ಲಿ ದೊರೆತ ಕ್ರಿ.ಶ.೧೦೨೯ರ ಬಲ್ಲಟಗಿಯ ಶಾಸನದಲ್ಲಿ ಎಡದೊರೆ-೨೦೦೦ದ ನಾಡಿನ ಭತ್ತಗ್ರಾಮವಾದ ಬಳ್ಳನಿಟ್ಟಿಗೆಯ ಬಸದಿಗೆ ಜದೇಕಮಲ್ಲನ ರಾಣಿ ಸೋಮಲದೇವಿಯು ಅಲ್ಲಿಯ ಕಂಮತದೊಳಗೆ ಪಿರಿಯ ಕೋಲಲ್ಲಿ ೨೪ ಮತ್ತರು ಕರಿಯ ನೆಲ, ಒಂದು ಮತ್ತರು ತೋಟ, ಐದು ಮನೆ, ಒಂದು ಗಾಣವನ್ನು ದಾನ ನೀಡಿದಂತೆ ತಿಳಿದುಬರುತ್ತದೆ.[೬೪]

ನೂರು ವರ್ಷಗಳ ಹಿಂದೆ ನೈಜಾಮ್ ರಾಜ್ಯದಲ್ಲಿ ಮಹಿಳೆಯರ ಸಾಮಾಜಿಕ ಪರಿಸ್ಥಿತಿ ಶೋಚನೀಯವಾಗಿತ್ತು. ಮಹಿಳೆಯರು ಹೊಸ್ತಿಲು ದಾಟಿ ಹೊರಗೆ ಹೋಗುವುದೇ ಕಷ್ಟವಗಿದ್ದ ಕಾಲದಲ್ಲಿ ಅವರಿಗೆ ಶಿಕ್ಷಣವೆಂಬುದು ಮರೀಚಿಕೆತಯಾಗಿತ್ತು. ಇಂಥಹ ಪರಿಸ್ಥಿಯಲ್ಲಿ ನಾಡಗೌಡ ಮನೆನತನದ ಮಹಿಳೆಯೊಬ್ಬಳು ಸ್ತ್ರೀಶಿಕ್ಷಣಕ್ಕೆ ದುಡಿಯಲು ಮುಂದಾದಳು. ರಾಣಿ ಜಡೆಯಮ್ಮ ನಾಡಗೌಡಕಿಯ ಹಮ್ಮು-ಬಿಮ್ಮುಗಳನ್ನು ಇಟ್ಟುಕೊಳ್ಳದೆ ಮನೆ-ಮನೆಗೆ ಹೋಗಿ ಮಹಿಳೆಯರಿಗೆ ಶಿಕ್ಷಣ ಕೊಡಿಸಲು ಅವರಲ್ಲಿ ಜಾಗೃತಿಯನ್ನು ತಂದುಕೊಟ್ಟದ್ದು ಮಹತ್ವದ್ದಾಗಿದೆ.

ಮಾನವಿ, ಸೀಕಲ್ಲು ಮತ್ತು ಬಾಪುರ ಮೂರು ಹಳ್ಳಿಗಳ ನಾಡಗೌಡಕೆಯ ಮನೆತನದ ರಾಣಿ ಜಡೆಯಮ್ಮ ಮಹಿಳಾ ಶಿಕ್ಷಣಕ್ಕೆ ಕಂಕಣತೊಟ್ಟಳು. ನಾಡಗೌಡಪಂಪನಗೌಡ(೧೮೫೫)ರು ಮಾನವಿ

ನಾಡಗೌಡ ಮನೆತನವನ್ನು ಅಭಿವೃದ್ಧಿಗೊಳಿಸಿ ಮನೆತನದ ಗೌರವವನ್ನು ಮುಗಿಲ ಎತ್ತರಕ್ಕೆ ತಂದುಕೊಟ್ಟರು. ಅವರ ಮಕ್ಕಳಾದ ನಾಡಗೌಡ ಚನ್ನಬಸಪ್ಪ(೧೮೮೫) ಮನೆತನದ ಗೌರವವನ್ನು ಕಾಪಾಡಿಕೊಂಡು ಬಂದರು. ಅವರ ಪತ್ನಿ ಜಡೆಯಮ್ಮ (೧೮೮೯-೧೯೬೬) ನಾಡಗೌಡ. ಮನೆತನದ ಕೀರ್ತಿಗೌರವಗಳು ಆಕೆಯ ಸಾಮಾಜಿಕ ಮತ್ತು ಶಿಕ್ಷಣ ಕ್ಷೇತ್ರಗಳಿಗೆ ಮಾಡಿದ ಅನುಪಮ ಸೇವೆಗಳಿಂದ ಹೆಚ್ಚಿದವು. ರಾಣಿ ಜಡೆಯಮ್ಮ ಶಿಕ್ಷಕ ವೃತ್ತಿ ಕೈಕೊಂಡು ಸುಮಾರು ೩೦ ವರ್ಷ ಉತ್ತಮ ಶಿಕ್ಷಕಿಯಾಗಿ ಮಹಿಳಾ ಶಿಕ್ಷಣಕ್ಕೆ ದುಡಿದಳು.[೬೫]

ಸಾಮಾನ್ಯ ಮಹಿಳೆಯರು ಹೊರಗೆ ಹೋಗದ ಕಾಲದಲ್ಲಿ ಇನ್ನೂ ನಾಡಗೌಡ ಮನೆತನದ ಮಹಿಳೆಯರು ಹೊರಗೆ ಬರುವುದಿರಲಿ ಗೌರವ ಕಟ್ಟುಪಾಡುಗಳಿಗೆ ಒಳಗಾಗಬೇಕಿತ್ತು. ಪರಪುರುಷರೊಡನೆ ಮಾತಾನಾಡಬೇಕಾದ ಸಂದರ್ಭದಲ್ಲಿ ಆಕೆ ಪರದೆ ಹಿಂದೆ ಮಾತಾನಾಡಬೇಕು. ಹೊರಹೋಗಬೇಕಾದಾಗ ಪೂರ್ಣವಾಗಿ ಆವರಣಗೊಂಡ ಸವಾರಿ ಬಂಡಿಯಲ್ಲಿ ಹೋಗಬೇಕು. ಒಂದು ರೀತಿಯ ಬುರ್ಖಾ ಪದ್ಧತಿಯಲ್ಲಿ ಮಹಿಳೆಯರು ಇರಬೇಕಾದ ವಾತಾವರಣದಲ್ಲಿ ರಾಣಿ ಜಡೆಯಮ್ಮ ಸರಕಾರಿ ಕನ್ಯಾಶಾಲೆಯ ಶಿಕ್ಷಕಿಯಾಗಿ ಕಾರ್ಯನಿರ್ವಹಿಸುವಾಗ ಆಕೆ ತನಗೆ ಎದುರಾದ ಎಲ್ಲಾ ಪರಿಸ್ಥಿತಿಯನ್ನು ಧೈರ್ಯದಿಂದ ಎದುರಿಸಿ ಸ್ತ್ರೀ ಶಿಕ್ಷಣಕ್ಕೆ ತಮ್ಮನ್ನು ಸಂಪೂರ್ಣ ಅರ್ಪಿಸಿಕೊಂಡರು.

ಸು.೧೮೮೯ ರಲ್ಲಿ ರಾಯಚೂರಿನಲ್ಲಿ ಜನಿಸಿದ ಜಡೆಯಮ್ಮ ಮಾನವೀಯ ನಾಡಗೌಡ ಮನೆತನಕ್ಕೆ ಸೊಸೆಯಾಗಿ ಬಂದರು. ಮನೆತನದ ರಾಜವೈಭವಗಳಿಗೆ ಆಕರ್ಷಿತಳಾಗದೆ ಹಿಂದುಳಿದ ಮಹಿಳೆಯರ ಶಿಕ್ಷಣಕ್ಕೆ ಸೇವೆ ಸಲ್ಲಿಸಲು ಮುಂದಾದಳು. ಮನೆತನದ ಕಟ್ಟುಪಾಡುಗಳನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಅದರಲ್ಲಿ ತಮ್ಮನ್ನು ಸಂಪೂರ್ಣ ತೊಡಗಿಸಿಕೊಂಡರು. ಸರಕಾರಿ ಕನ್ಯಾಶಾಲೆಯ ಶಿಕ್ಷಕಿಯಾಗಿ ಜಡೆಯಮ್ಮ ತಮ್ಮ ಸೇವೆಯನ್ನು ಕುರುಡಿ ಶಾಲೆಯಿಂದ ಆರಂಭಿಸಿದರು. ತರುವಾಯ ಅವರು ಮಾನವಿಯ ಈಗಿರುವ ಸರಕಾರಿ ಕನ್ಯ ಪ್ರಾಥಮಿಕ ಶಾಲೆಗೆ ವರ್ಗವಾಗಿ ಬಂದರು. ಇಲ್ಲಿ ಅವರು ನಿವೃತ್ತವಾಗುವವರೆಗೂ ಸುಮಾರು ೨೫ ವರ್ಷಗಳ ಸುದೀರ್ಘ ಕಾಲ ಸೇವೆ ಸಲ್ಲಿಸಿದರು. ಅವರು ಉರ್ದು ಮತ್ತು ಕನ್ನಡ ಮಾಧ್ಯಮದಲ್ಲಿ ಬೋಧನೆ ಮಾಡುತ್ತಿದ್ದರು. ಉರ್ದು ಶಾಲೆಯ ಮುಖ್ಯೋಪಾಧ್ಯಾಯನಿ ಶಾಲೆಯ ಮೇಲ್ವಿಚಾರಕಿಯು ಆಗಿದ್ದಳು. ಈ ಶಾಲೆಗೆ ಜಡೆಯಮ್ಮ ಶಿಕ್ಷಕಿಯಾಗಿ ಬಂದ ಮೇಲೆ ಒಂದು ಹೊಸ ವಾತಾವರಣ ನಿರ್ಮಾಣವಾಯಿತು. ಅವರು ವಿದ್ಯಾರ್ಥಿನಿಯರ ಅಚ್ಚುಮೆಚ್ಚಿನ ಶಿಕ್ಷಕಿಯಾದರು. ಕನ್ನಡ ವಿದ್ಯಾರ್ಥಿನಿಯ ಸಂಖ್ಯೆ ಹೆಚ್ಚಾಯಿತು. ಅದರೊಂದಿಗೆ ಶಾಲೆಯ ಕೀರ್ತಿ ಹರಡಿತು.

ಜಡೆಯಮ್ಮನವರು ಮನೆಯಿಂದ ಶಾಲೆಗೆ ಪೂರ್ಣ ಆವರಣಗೊಂಡ ಸವಾರಿ ಬಂಡಿಯಲ್ಲಿ ಹೋಗುತ್ತಿದ್ದರು. ಈ ಸವಾರಿ ಬಂಡಿಯ ವ್ಯವಸ್ಥೆಯನ್ನು ಆಗಿನ ನಿಜಾಮ ಸರಕಾರ ಜಡೆಯಮ್ಮ ಮತ್ತು

ಮುಖ್ಯೋಪಾಧ್ಯಾಯನಿಗೆ ಸೂತ್ರ ಒದಗಿಸಿಕೊಟ್ಟಿತ್ತು. ಒಡೆಯಮ್ಮನ ವ್ಯಕ್ತಿತ್ವ ಗೌರವ ಭಾವ ತರುವಂತಿತ್ತು. ಸಂಪ್ರದಾಯ ಮನೆತನದ ಉಡುಪು, ಸದಾ ತಲೆಯ ಮೇಲೆ ಸೆರಗು, ಹಣೆತುಂಬ ವಿಭೂತಿ, ಮಧ್ಯದಲ್ಲಿ ಕುಂಕುಮ, ಧ್ವನಿಯಲ್ಲಿ ಗಡುಸುತವಿಲ್ಲ. ಮತ್ತೊಬ್ಬರ ನೋವಿನಲ್ಲಿ ಮಿಡಿಯುವ ಅಂತಃ ಕರಣ ಇತರ ಮಕ್ಕಳನ್ನು ತನ್ನ ಮಕ್ಕಳಂತೆ ಕಾಣುವ ವಾತ್ಸಲ್ಯಮಯಿ.

೩೦ ವರ್ಷ ಶಿಕ್ಷಕಿಯಾಗಿ ಸೇವೆ ಸಲ್ಲಿಸಿದ ರಾಣಿ ಅಂದಿನ ಮಹಿಳೆಯರ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹಿಸಿ, ಸಾವಿರಾರು ಹೆಣ್ಣು ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಿದರು. ಎಲ್ಲ ವಿದ್ಯಾರ್ಥಿಗಳ ಶಿಕ್ಷಕಿಯರ ಅಪಾರ ಗೌರವ ಸಂಪಾದಿಸಿದ ರಾಣಿ ಜಡೆಯಮ್ಮ ೧೯೩೪ರಲ್ಲಿ ನಿವೃತ್ತರಾದರು. ನಂತರ ೨೨ ವರ್ಷ ಜೀವಿಸಿದ್ದ ಅವರು ೧೯೬೬ರಲ್ಲಿ ನಿಧನರಾದರು. ಹೈದರಾಬಾದ್ ಪ್ರದೇಶದಲ್ಲಿ ಸ್ತ್ರೀಶಿಕ್ಷಣಕ್ಕೆ ಸೇವೆಗೈದ ರಾಣಿ ಜಡೆಯಮ್ಮ ಮೈಸೂರಿನ ಕೆ.ಕಲ್ಯಾಣಮ್ಮನ ಹೆಸರಿನೊಂದಿಗೆ ಸಮಾನಳಾಗುತ್ತಾಳೆ.[೬೬]

ರಾಯಚೂರು ಜಿಲ್ಲೆಯು ಪ್ರಾಚೀನ ಕಾಲದಲ್ಲಿ ಅನೇಕ ದೇವಾಲಯಗಳು ಮತ್ತು ಮಠಗಳಿಂದ ತುಂಬಿದ್ದರಿಂದ ಸಹಜವಾಗಿಯೇ ಅವು ವಿದ್ಯಾಭ್ಯಾಸದ ಕೇಂದ್ರಗಳಾಗಿದ್ದವು. ಯಾವುದೇ ಕಾಲವಿರಲಿ ವಿದ್ಯೆಗಿರುವ ಮಹತ್ವ ಅತ್ಯಂತ ಹೆಚ್ಚಾದುದು. ನಾಡಿನಾದ್ಯಂತ ದೊರೆತ ಈ ಮೇಲಿನ ಶಾಸನಗಳೇ ಆ ಕಾಲದ ವಿದ್ಯಾಭ್ಯಾಸ ಪದ್ಧತಿಗೆ ಜೀವಂತ ನಿದರ್ಶನಗಳಾಗಿವೆ. ಅರಸರು ವಿದ್ಯೆಗೆ ಕೊಡುತ್ತಿದ್ದ ಉದಾರವಾದ ಪ್ರೋತ್ಸಾಹ ಧನವೇ ಇದಕ್ಕೆ ಕಾರಣವಾಗಿದೆ. ರಾಜನು ಶಿಕ್ಷಣ ವ್ಯವಸ್ಥೆಯ ವಿಷಯದಲ್ಲಿ ಔದಾರ್ಯದಿಂದಲೇ ನಡೆದುಕೊಂಡಿದ್ದಾನೆ. ಅಗ್ರಹಾರ, ಬ್ರಹ್ಮಪುರಿ ಮತ್ತು ಭತ್ತಗ್ರಾಮ, ಘಟಿಕಾಲಯ, ದೇವಸ್ಥಾನಗಳಲ್ಲಿ ನೆಲೆಸಿದ್ದ ಮಹಾಜನರಿಗೆ, ಪುರೋಹಿತರಿಗೆ, ವಿದ್ವಾಂಸರಿಗೆ ಜೀವನಾವಶ್ಯಕತೆಗೆಂದು ಭೂಮಿಯನ್ನು ದಾನವಾಗಿ ಕೊಡುತ್ತಿದ್ದರು. ಇಲ್ಲಿ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರೋತ್ಸಾಹವಿರುತ್ತಿತ್ತು.

## ೪.೩. ಮಹಾಸತಿಯರು

ಪ್ರಾಚೀನ ಭಾರತದ ಕ್ರೂರ ಪದ್ಧತಿಯಾದ ಮಹಾಸತಿ ಅಥವಾ ಸಹಗಮನ ಪದ್ಧತಿ ಎಂದು ಮತ್ತು ಹೇಗೆ? ರೂಢಿಯಲ್ಲಿ ಬಂದಿತೆಂಬುದರ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ. ವೇದಕಾಲದಿಂದಲೂ ಅದು ನಡೆದುಬಂದಿದೆ ಎಂದು ಧಾರ್ಮಿಕರು ಸಾರಿದರೆ, ಪುರಾಣತಜ್ಞರು, ಸತಿದೇವಿ ಶಿವನಿಂದನೆಯನ್ನು ಸಹಿಸಲಾಗದೇ ದಕ್ಷಬ್ರಹ್ಮನ ಯಜ್ಞಕುಂಡದಲ್ಲಿ ಹಾರಿ ಪ್ರಾಣತ್ಯಾಗ ಮಾಡಿದಂದಿನಿಂದ ಇದು ಜಾರಿಯಲ್ಲಿ ಬಂದಿರಬೇಕೆಂದು ವಾದಿಸುತ್ತಾರೆ. ಪುರುಷರ ಹಿರಿಮೆ ಎತ್ತಿ ಹಿಡಿಯಲು ಅವರೇ ಈ ಅಮಾನುಷ ಪದ್ಧತಿಯ ಪ್ರಚಾರಕರಾಗಿದ್ದಾರೆಂಬುದನ್ನು ನಾರೀ-ಪುರುಷ ಸಮಾನತಾ ತಂಡದವರು ತೀರ್ಮಾನಿಸಿದರೆ, ಜಾತಿಪದ್ಧತಿ ವಿರೋಧಿಗಳು, ಕುಲೀನರು ಕೆಳವರ್ಗದವರ ಮೇಲೆ ಹೇರಿದ ದೌರ್ಜನ್ಯದ ಪ್ರತೀಕ ಇದು ಎಂದು ಹೇಳುತ್ತಾರೆ.[೬೭]

ಪ್ರಾಚೀನ ಜನಾಂಗಗಳು ಈ ಲೋಕದಂತಹ ಇನ್ನೊಂದು ಲೋಕವಿದೆಯೆಂದು ಬಹುದೃಢವಾಗಿ ನಂಬಿದ್ದರು. ವ್ಯಕ್ತಿ ಮಡಿದಾಗ ಅವನು ಆ ಪರಲೋಕಕ್ಕೆ ಹೋಗುವನೆಂದು ಅಲ್ಲಿಯ ಅವನ ಭೋಗಕ್ಕೆ ಇಲ್ಲಿಂದ ಅವನಿಗಿಷ್ಟವಾದ ವಸ್ತುಗಳನ್ನು ಕಳುಹಿಸಬೇಕೆಂದು ಭಾವಿಸಿದ್ದರು. ಬಹುಶಃ ಸಹಗಮನ ಪದ್ಧತಿಗೆ ಕಾರಣವಾಗಿರಬಹುದು. ಅಥವಾ ತಾನು ಸತ್ತ ಮೇಲೆ ತನ್ನ ಪ್ರೇಯಸಿಯು ಇನ್ನೊಬ್ಬನ ವಶಳಾಗುವ ಸಾಧ್ಯತೆಯನ್ನು ಕಲ್ಪಿಸಿಕೊಂಡ ಪುರುಷನ ಅಸೂಯೆಯೂ ಕಾರಣವಾಗಿರಬಹುದು. ಪತಿಯ ಜೊತೆಯಲ್ಲಿಯೇ ಅವಳ ವಿಧವೆಯನ್ನು ಸುಡುವ ಪದ್ಧತಿಯೂ ಪ್ರಾಚೀನ ಭಾರತದಲ್ಲಿ ಮಾತ್ರವಲ್ಲ, ಪ್ರಾಚೀನ ಗ್ರೀಕ್, ಜರ್ಮನ್ ಮುಂತಾದ ಯುರೋಪ್ ಮತ್ತು ಪಶ್ಚಿಮ ಏಷ್ಯ ಜನಾಂಗಗಳಲ್ಲಿಯೂ ಕಂಡುಬರುತ್ತಿತ್ತು.

ದೇವನಿಗಾಗಿ ಕೈಕೊಳ್ಳುವ ಆತ್ಮಬಲಿದಾನ, ಪ್ರಿಯ ವ್ಯಕ್ತಿಗಳಿಗೆ, ಸಂಬಂಧಪಟ್ಟಂತೆ ಪತಿಯ ಸಲುವಾಗಿ ಸತಿ ಕೈಗೊಂಡರೆ 'ಸಹಗಮನ ಮರಣವೆನಿಸಿತು. ಪತಿಯ ಯಾವುದೇ ರೀತಿಯ ಮರಣ ನಂತರ ಮಡದಿ ಪ್ರಮುಖವಾಗಿ ಅಗ್ನಿ ಪ್ರವೇಶದ ಮೂಲಕ ಗೌಣವಾಗಿ ಇತರ ವಿಧಾನಗಳ ಮೂಲಕ ತನ್ನ ಪ್ರಾಣವನ್ನು ಬಲಿಕೊಡುತ್ತಿದ್ದಳು. ಹೀಗೆ ಪ್ರಾಣವನ್ನರ್ಪಿಸುವವಳೇ ಮಹಾಸತಿ. ಮಾಸ್ತಿ ಎಂಬುದು ಇದರ ತದ್ಭವ ರೂಪವಾಗಿದೆ.

ಸಹಗಮನ ಮತ್ತು ಅನುಗಮನವೆಂದು ಎರಡು ವಿಧದಲ್ಲಿ ಪ್ರಚಲಿತವಿದ್ದ ಪದ್ಧತಿಯಿದು. ಮರಣ ಹೊಂದಿದ ಪತಿಯ ಶವದೊಡನೆ ಅಗ್ನಿಪ್ರವೇಶಗೈಯುವುದು ಸಹಗಮನವಾದರೆ, ದೂರದ ಪ್ರದೇಶದಲ್ಲಿ ಮಡಿದ ಪತಿಯ ಸುದ್ದಿ ಕೇಳಿ ಸ್ವತಹ ಅಗ್ನಿಪ್ರವೇಶಗೈಯುವುದು ಅನುಗಮನ. ಉದಾ : ಬೆಳತೂರಿನ ದೇಕಬ್ಬೆ ಶಾಸನವಿದೆ. ಈ ಸಂಪ್ರದಾಯ ಅತ್ಯಂತ ಪ್ರಾಚೀನ ಕಾಲದಿಂದಲೂ ಜಗತ್ತಿನ ಅನೇಕ ಜನಾಂಗಗಳಲ್ಲಿ, ವ್ಯಾಪಕವಾಗಿ ಬೆಳೆದು ಬಂದಿತು.

ಬ್ರಾಹ್ಮಣ ಸಾಹಿತ್ಯ, ಗೃಹಸೂತ್ರ ಮತ್ತು ಬೌದ್ಧ ಸಾಹಿತ್ಯಗಳು ಸಹಗಮನ ವಿಷಯದಲ್ಲಿ ಮೌನ ತಾಳಿವೆ. ಕ್ರಿ.ಶ.ಪೂ.೪ನೇ ಶತಮಾನದವರೆಗೆ ಈ ಪದ್ಧತಿ ಪ್ರಬಲವಾಗಿ ಬೆಳೆದು ಬಂದಿರಲಿಲ್ಲ. ಮೆಗಸ್ತಾನೀಸ್, ಕೌಟಿಲ್ಯ ಇಬ್ಬರಲ್ಲಿಯೂ ಇದು ಉಲ್ಲೇಖಿಸಲ್ಪಟ್ಟಿಲ್ಲ. ಪ್ರಾಚೀನ ಸ್ಮೃತಿಕಾರನಾದ ಮನು ಮತ್ತು ಯಜ್ಞವಲ್ಕ್ಯರೂ ಇದನ್ನು ಹೆಸರಿಸಿಲ್ಲ. ಮಹಾಭಾರತ ಮತ್ತು ರಾಮಾಯಣಗಳು ಮಾತ್ರ ಈ ಪದ್ಧತಿಯ ಬಗೆಗೆ ಹೆಚ್ಚಿನ ಬೆಳಕು ನೀಡುತ್ತವೆ. ಮಹಾಭಾರತದಲ್ಲಿ ಪ್ರಮುಖವಾದುದು ಪಾಂಡು ರಾಜನ ಮಡದಿ ಮಾದ್ರಿಯ ಸಹಗಮನ. ರಾಮಾಯಣದಲ್ಲಿ ದಶರಥನ ಮರಣಾನಂತರ ಕೌಶಲ್ಯೆ ಸಹಗಮನ ಮಾಡುವುದಾಗಿ ಹೇಳುತ್ತಾರೆ.

ಮಹಾಸತಿಯಾಗುವವಳು ಮಧುಮಗಳಂತೆ ಸಿಂಗರಿಸಿಕೊಂಡು ಆಪ್ತೇಷ್ಟರೊಡಗೂಡಿ ಬರಿಗಾಲಿನಿಂದ ಮೆರವಣಿಗೆಯಲ್ಲಿ ಹೋಗುತ್ತಿದ್ದಳು. ದಾರಿಯುದ್ದಕ್ಕೂ ಜನ ಜಯ ಜಯಕಾರ ಹಾಕುತ್ತಿದ್ದರಲ್ಲದೆ ಮಹಾಸತಿಯು ಮುಡಿದ ಹೂ, ಹಿಡಿದ ಲಿಂಬೆ ಹಣ್ಣುಗಳನ್ನು ಅಶೀರ್ವಾದ ರೂಪದಲ್ಲಿ ಪಡೆಯಲು ಹೆಣಗುತ್ತಿದ್ದರು. ಸ್ಥಿತಿವಂತ ಮಹಿಳೆಯರು ಪಲ್ಲಕ್ಕಿ ಇಲ್ಲವೇ ಕುದುರೆಯನ್ನೇರುತ್ತಿದ್ದರು. ಚಿತೆಯೇರುವ ಮುನ್ನ ಮಾಂಗಲ್ಯದ ದೇವತೆಯಾದ ಗೌರಿಗೆ ಪೂಜೆ ಸಲ್ಲಿಸಿ, ಕಾದ ಎಣ್ಣೆಯಲ್ಲಿ ಮುಖವನ್ನು ವೀಕ್ಷಿಸಿ, ಕೈಯಲ್ಲಿ ಫಲ-ಪುಷ್ಪಗಳನ್ನು ಹಿಡಿದು, ಸತಿ ಹೋಗುವ ಸ್ಥಳದಲ್ಲಿ ಎತ್ತರ ಶಿಲೆಯೊಂದರ ಮೇಲೆ ಸುಮೂಹೂರ್ತಕ್ಕಾಗಿ ಕಾದು ನಿಂತಿರುತ್ತಿದ್ದಳು. ಕಟ್ಟಿಗೆ, ಕರ್ಪೂರಗಳಿಂದ ಧಗಧಗನೆ ಉರಿಯುವ ಚಿತೆಯೆದುರು ಅಂತರಪಟ ಹಿಡಿಯಲಾಗುತ್ತಿತ್ತು. ಮಂತ್ರ ಪಠನವಾಗಿ ತೆರೆಹೊಗಗೊಟ್ಟಾಗ ಸತೀಸಾಧ್ವಿಯು ನಗುಮುಖದಿಂದ ಹೂವ್ವಿನ ಹಾಸಿಗೆಯೇರುವಂತೆ ಚಿತೆಯನ್ನೇರಿ ಭಸ್ಮವಾಗುತ್ತಿದ್ದಳಂತೆ.

## ೧೭ನೇ ಶತಮಾನದ ವೀರ ಮಹಾಸತಿಗಳು

ಕ್ಯಾದಿಗ್ಗೇರಾ ಗ್ರಾಮದ ಶಾಲೆಯ ಆವರಣದಲ್ಲಿ ಒಂದು ವೀರ ಮಹಾಸತಿ ಶಿಲ್ಪವಿದೆ. ಇದರಲ್ಲಿ ವೀರನು ಕುದುರೆ ಮೇಲೆ ಕುಳಿತುಕೊಂಡು ಎಡಗೈಯಲ್ಲಿ ಲಗಾಮು, ಬಲಗೈಯಲ್ಲಿ ಖಡ್ಗವನ್ನು ಹಿಡಿದಿದ್ದಾನೆ. ಕಿವಿಯಲ್ಲಿ ಓಲೆ, ಕೊರಳಲ್ಲಿ ಮಣಿಸರ, ಕಂಠಿಹಾರ ಹಾಕಿ ಕೊಂಡಿದ್ದಾನೆ. ಕೈಯಲ್ಲಿ ತೋಳ ಬಂದಿ, ಕೈಕಡಗ ಹಾಗೂ ಸೊಂಟದಲ್ಲಿ ಸೊಂಟಪಟ್ಟಿ ಮತ್ತು ಕತ್ತಿಯಿದೆ. ಕೂದಲುಗಳನ್ನು ಗಂಟು ಹಾಕಿ ಬಲಕ್ಕೆ ಕಟ್ಟಿಕೊಂಡಿದ್ದಾನೆ. ಮೀಸೆ ಉದ್ದವಾಗಿವೆ. ಈತನ ಹಿಂದೆ ಮಹಾಸತಿ ಇದ್ದು, ಈಕೆಯು ಕುದುರೆ ಲಗಾಮು ಹಿಡಿದಿದ್ದಾಳೆ. ಕಿವಿಯಲ್ಲಿ ರಿಂಗ್ ಗಳನ್ನು, ಕೈಯಲ್ಲಿ ಕೈಕಡಗ ಹಾಗೂ ಕೈತುಂಬ ಬಳೆಗಳು, ಕಂಠಿಹಾರ, ಮುತ್ತಿನ ಸರಗಳು, ಈಕೆಯ ಕುಚಗಳು ಮತ್ತು ಸೀರೆಯನ್ನು ಸೊಗಸಾಗಿ ಕೆತ್ತಿದ್ದಾರೆ. ಸೊಂಟದಲ್ಲಿ ಸೊಂಟಪಟ್ಟಿಯಿದೆ. ಈಕೆಯ ಹಿಂದೆ ಒಬ್ಬ ಸೇವಕ ಇದ್ದಾನೆ. ಧ್ವಜ, ರಾಜಛತ್ರಿ, ಚಂದ್ರಚಾಮರ, ಸೂರ್ಯ, ಚಂದ್ರನ, ಶಿಲ್ಪಗಳಿವೆ. ಅದೇ ಗ್ರಾಮದ ಅದೇ ಸ್ಥಳದಲ್ಲಿ ಇನ್ನೊಂದು ವೀರ ಮಾಸ್ತಿ ಶಿಲ್ಪವಿದೆ. ಇದರಲ್ಲಿ ವೀರನು ಬಲಗೈಯಲ್ಲಿ ಉದ್ದನೆಯ ಭರ್ಜಿ, ಎಡಗೈಯಲ್ಲಿ ಕುದುರೆ ಲಗಾಮು ಹಿಡಿದು ಕುಳಿತಿದ್ದಾನೆ. ಕೂದಲನ್ನು ಗಂಟುಕಟ್ಟಿ ಹಾಕಿದ್ದಾನೆ. ಕೊರಳಲ್ಲಿ ಸರಗಳು, ಕೈಯಲ್ಲಿ ಕೈಕಡಗ, ತೋಳುಬಂದಿ, ಸೊಂಟದಲ್ಲಿ ಸೊಂಟಪಟ್ಟಿ ಹಾಗೂ ಕತ್ತಿಯಿದೆ. ಈತನ ರಾಣಿಯು ಕುದುರೆ ಮೇಲೆ ಇದ್ದು. ಬಲಗೈಯಲ್ಲಿ ಚಾಕು ಅದರ ತುದಿಯಲ್ಲಿ ನಿಂಬೆಹಣ್ಣು ಇದೆ. ಎಡಗೈಯಲ್ಲಿ ಕನ್ನಡಿ, ಕುಚಗಳ ಮಧ್ಯೆ ಇರುವ ಮೂರು ಹಂತದ ಸರಗಳು ಸೀರೆಯ ಸೆರಗೂ ಉದ್ದಕ್ಕೆ ಬಿಟ್ಟಿದ್ದಾಳೆ. ಕೂದಲುಗಳನ್ನು ಉದ್ದಕ್ಕೆ ಬಿಟ್ಟಿದ್ದಾಳೆ. ಕೈತುಂಬ ಬಳೆಗಳು, ತೋಳುಬಂದಿ, ಹಾಕಿದ್ದಾಳೆ ಮತ್ತು ಮುಂದೆ ರಾಜಛತ್ರಿ ಹಿಡಿದ ಸೇವಕ, ಕೆಳಗೆ ನಾಯಿಗಳ ಶಿಲ್ಪ ಇದೆ. ಕುದುರೆಯನ್ನು ಸೊಗಸಾಗಿ ಕೆತ್ತಿದ್ದಾರೆ.

ಅದೇ ಗ್ರಾಮದ ಅದೇ ಸ್ಥಳದಲ್ಲಿರುವ ಮತ್ತೊಂದು ವೀರಮಾಸ್ತಿ ಶಿಲ್ಪದಲ್ಲಿ ಒಬ್ಬ ವೀರ ಹಾಗೂ ಇಬ್ಬರು ಸತಿಯರಿದ್ದಾರೆ. ವೀರನು ಕುದುರೆ ಮೇಲೆ ಕುಳಿತು ಖಡ್ಗ ಹಿಡಿದಿದ್ದಾನೆ. ಉದ್ದನೆಯ ಮೀಸೆ ಬಿಟ್ಟು, ಕೂದಲುಗಳನ್ನು ಗಂಟು ಹಾಕಿದ್ದಾನೆ. ಕಿವಿಯಲ್ಲಿ ಜುಮುಕಿ, ಕೊರಳಲ್ಲಿ ಸರಳಗಳು, ಸೊಂಟದಲ್ಲಿ ಕತ್ತಿ ಇವೆ. ಇಬ್ಬರು ಸತಿಯರು ಕುದುರೆ ಮೇಲೆ ಕುಳಿತಿದ್ದಾರೆ. ಇವರು ಬಲಗೈಯಲ್ಲಿ ನೀರಿನ ತಂಬಿಗೆ ಎಡಗೈಯಲ್ಲಿ ಲಗಾಮು, ಕೈತುಂಬ ಬಳೆಗಳು, ಕೊರಳಲ್ಲಿ ಕಂಠಿಹಾರ, ಕೂದಲು ತುರುಬು ಹಾಕಿದ್ದಾರೆ. ಕುಚ್ಚುಗಳ ಸೀರೆಯನ್ನು ಸೊಗಸಾಗಿ ಕೆತ್ತಿದ್ದಾರೆ. ರಾಜಛತ್ರಿ, ಚಂದ್ರಚಾಮರ, ಧ್ವಜ, ಸೂರ್ಯ, ಚಂದ್ರ ಶಿಲ್ಪಗಳಿವೆ. ಮೇಲೆ ಇಬ್ಬರು ಸೇವಕರಿದ್ದಾರೆ. ಅದೇ ಸ್ಥಳದಲ್ಲಿ ವೀರಮಾಸ್ತಿ ಶಿಲ್ಪದಲ್ಲಿ ಒಬ್ಬ ರಾಜ ಹಾಗೂ ಇಬ್ಬರು ರಾಣಿಯರು ಮತ್ತೊಬ್ಬ ಸೈನಿಕನಿದ್ದಾನೆ. ರಾಜನು ಉದ್ದನೆಯ ಮೀಸೆಯನ್ನು ಬಿಟ್ಟಿದ್ದಾನೆ. ಕೂದಲುಗಳನ್ನು ತುರುಬು ಹಾಕಿದ್ದಾನೆ. ಸೊಂಟದಲ್ಲಿ ಸೊಂಟಪಟ್ಟಿ ಕತ್ತಿ ಇದೆ. ಕೊರಳಲ್ಲಿ ಸರ, ಕಿವಿಯಲ್ಲಿ ಓಲೆ, ಇನ್ನೊಬ್ಬ ವೀರನ ಕೈಯಲ್ಲಿ ಜಂಬೆ ಇದೆ. ಕೂದಲುಗಳ ತುರುಬು, ಸರಗಳು, ಸೊಂಟಪಟ್ಟಿ, ಕಿವಿ ಓಲೆ, ಇವೆ. ಇಬ್ಬರು ರಾಣಿಯರು ಬಲಗೈಯಲ್ಲಿ ತಂಬಿಗೆ, ಎಡಗೈ ಮೇಲೆ ಎತ್ತಿದ್ದಾರೆ. ಸೊಂಟಪಟ್ಟಿ ಸರಗಳು, ಕುಚಗಳು ಬಳೆಗಳು ಇವೆ. ಮೇಲೆ ದನ, ಚಾಮರ, ರಾಜಛತ್ರಿ, ಧ್ವಜ ಶಿಲ್ಪಗಳನ್ನು ಚಿತ್ರಿಸಲಾಗಿದೆ. ಅದೇ ಸ್ಥಳದಲ್ಲಿ ವೀರನು ಕುದುರೆ ಮೇಲೆ ಇದ್ದಾನೆ. ಇವನ ಬಲಗೈಯಲ್ಲಿ ಖಡ್ಗವಿದೆ. ಸೊಂಟದಲ್ಲಿ ಸೊಂಟಪಟ್ಟಿ ಕತ್ತಿ ಇವೆ. ಕೊರಳಲ್ಲಿ ಸರ ಕಾಲ್ಗಡಗ, ಕೈಗಡಗ, ಹಾಕಿಕೊಂಡಿದ್ದಾನೆ. ಹಿಂದೆ ಸತಿಯು ಕುದುರೆ ಮೇಲೆ ಕುಳಿತ್ತಿದ್ದಾಳೆ. ಇವಳು ಸರಗಳು, ಓಲೆ, ಬಳೆಗಳು, ತೋಳುಬಂದಿ, ಸೀರೆ ಮುಂತಾದವುಗಳನ್ನು ಧರಿಸಿದ್ದಾಳೆ. ಇಬ್ಬರು ಸೇವಕರು ಇದ್ದಾರೆ. ಒಬ್ಬನ ಕೈಯಲ್ಲಿ ಖಡ್ಗ, ಕಪ್ಪ ಮತ್ತು ರಾಜಛತ್ರಿ, ಧ್ವಜ, ಸೂರ್ಯ, ಚಂದ್ರ ಶಿಲ್ಪಗಳಿವೆ.

೧೫-೧೬ನೇ ಶತಮಾನಕ್ಕೆ ಸಂಬಂಧಿಸಿದ ಅನೇಕ ಮಹಾಸತಿ ಸ್ಮಾರಕಗಳು ದೊರೆಯುತ್ತವೆ. ಬೆಟ್ಟದಲ್ಲಿರುವ ಮಹಾಸತಿಯು ಕಲ್ಲಿನಲ್ಲಿ ವೀರನು ಕುದುರೆ ಮೇಲೆ ಕುಳಿತು ಬಲಗೈಯಲ್ಲಿ ಖಡ್ಗ ಹಿಡಿದಿದ್ದಾನೆ. ಎಡಗೈಯಲ್ಲಿ ಲಗಾಮು ಇದೆ. ಮೀಸೆಯನ್ನು ಉದ್ದವಾಗಿ ಕೆತ್ತಲಾಗಿದೆ. ಸೊಂಟದಲ್ಲಿ ಸೊಂಟಪಟ್ಟಿ ಕತ್ತಿ ಮುಂದೆ ಮಹಾಸತಿಯ ಶಿಲ್ಪವಿದೆ. ಬಲಗೈಯಲ್ಲಿ ತಂಬಿಗೆ ಹಿಡಿದಿದ್ದಾಳೆ. ಕುಚಗಳು, ವಸ್ತ್ರ, ಕಿವಿ ಓಲೆ ಮುಂತಾದವುಗಳಿವೆ. ಪರಿವಾರ ಇದ್ದಾರೆ. ಇದೇ ಬೆಟ್ಟದಲ್ಲಿ ಒಂಟಿ ಮಹಾಸತಿ ಶಿಲ್ಪವಿದೆ. ಇದೆ. ಈಕೆಯ ಕೈಯಲ್ಲಿ ಬಳೆಗಳು, ತೋಳುಬಂದಿ, ಸೊಂಟದ ಪಟ್ಟಿ, ಸೀರೆಯನ್ನು ತೊಟ್ಟಿದ್ದಾಳೆ. ನಿರಿಗೆ ಕೆಳಗೆ ಬಿಟ್ಟಿದ್ದಾಳೆ. ಕೊರಳ ಸರ, ಕಿವಿಯ ಓಲೆ, ಇವೆ.

ವೀರನು ಕುದುರೆ ಮೇಲೆ ಕುಳಿತಿದ್ದಾನೆ. ಎಡಗೈಯಲ್ಲಿ ಲಗಾಮು, ಬಲಗೈಯಲ್ಲಿ ಖಡ್ಗವಿದೆ. ಕೂದಲನ್ನು ಗಂಟು ಹಾಕಿ ತುರುಬು ಕಟ್ಟಿದ್ದಾನೆ. ಕೊರಳಲ್ಲಿ ಸರ ಸೊಂಟದಲ್ಲಿ ಸೊಂಟಪಟ್ಟಿ, ಕಿವಿ

ಒಲೆ ಹಾಕಿಕೊಂಡಿದ್ದಾನೆ. ಮೀಸೆಯನ್ನು ಉದ್ದವಾಗಿ ಬಿಟ್ಟಿದ್ದಾನೆ. ಪಕ್ಕದಲ್ಲಿ ಮೂರು ಸತಿಗಳ ಶಿಲ್ಪಗಳಿವೆ. ಮೂವರು ಎಡಗೈಯನ್ನು ಮೇಲಕ್ಕೆ ಎತ್ತಿದ್ದಾರೆ. ಬಲಗೈಯಲ್ಲಿ ನೀರಿನ ತಂಬಿಗೆ ಹಿಡಿದಿದ್ದಾಳೆ. ಸೀರೆಯನ್ನು ತೊಟ್ಟು ನರಿಗೆ ಬಿಟ್ಟಿದ್ದಾಳೆ. ಕುಚಗಳ ಕೆತ್ತನೆ, ಬಳೆಗಳು, ತುಂಬ ಸೊಗಸಾಗಿವೆ. ಇನ್ನೊಂದು ವೀರಗಲ್ಲು ಶಿಲ್ಪದಲ್ಲಿ ವೀರನು ಕುದುರೆ ಮೇಲೆ ಕುಳಿತಿದ್ದಾನೆ. ಬಲಗೈಯಲ್ಲಿ ಬಾಣ, ಎಡಗೈಯಲ್ಲಿ ಬಿಲ್ಲಿದೆ. ಸೋಂಟದಲ್ಲಿ ಕತ್ತಿ ರಾಜಛತ್ರಿ, ಹಿಂಬದಿಯಲ್ಲಿ ಇಬ್ಬರು ಸತಿಯರು ಇದ್ದಾರೆ. ಸತಿಯರು ಬಳೆಗಳು, ಕುಚಗಳು ತೋಳುಬಂದಿಯನ್ನು ಸೊಗಸಾಗಿ ಕೆತ್ತಿದ್ದಾರೆ. ಜೊತೆಯಲ್ಲಿ ಇನ್ನೊಬ್ಬ ಸೇವಕನಿದ್ದು, ಬಲಗೈಯಲ್ಲಿ ಕತ್ತಿ ಎಡಗೈಯಲ್ಲಿ ನೀರಿನ ಕಳಸ ಹಿಡಿದಿದ್ದಾನೆ. ರಾಮದುರ್ಗದ ಬೆಳದೂಣೆ ಸಿದ್ದೇಶ್ವರ ದೇವಾಲಯದ ಆವರಣದಲ್ಲಿ ವೀರ ಮಹಾಸತಿಯಿದೆ. ಇದರಲ್ಲಿ ವೀರನು ಎರಡು ಕೈಯಲ್ಲಿ ಡಮರುಗಳನ್ನು ಹಿಡಿದಿದ್ದಾನೆ. ಕೂದಲು ತುರುಬು ಕಟ್ಟಿದ್ದಾನೆ. ಕಿವಿಯಲ್ಲಿ ಜುಮುಕಿ, ಕೈಯಲ್ಲಿ ತೋಳಬಂದಿ, ಕೈಕಡಗ, ಕೊರಳಲ್ಲಿ ಸರ, ಕಾಲಲ್ಲಿ ಕಾಲ್ಗಡಗ, ದೋತ್ರವನ್ನು ಮೇಲಕ್ಕೆ ಕಟ್ಟಿ ನೀರಿಗೆಯನ್ನು ಕೆಳಗಿನವರೆಗೆ ಬಿಟ್ಟಿದ್ದಾನೆ. ಈತನ ಎಡಭಾಗದಲ್ಲಿ ಮಹಾಸತಿ ನಿಂತಿದ್ದಾಳೆ. ಇವಳ ಎರಡೂ ಕೈಯಲ್ಲಿ ನಿಂಬೆ ಹಣ್ಣುಗಳಿವೆ. ಸೀರೆಯನ್ನು ತೊಟ್ಟಿದ್ದಾಳೆ. ಕೈಯಲ್ಲಿ ಬಳೆಗಳು ತೋಳುಬಂದಿ, ಕಿವಿಯಲ್ಲಿ ಜುಮುಕಿ, ಕೊರಳಲ್ಲಿ ಸರ, ಸೊಂಟದಲ್ಲಿ ಸೊಂಟಪಟ್ಟಿ ಇವೆ. ವೀರನ ಮುಂಬದಿಯಲ್ಲಿ ಕುರಿಗಳನ್ನು ಬಿಡಿಸಿರುವುದರಿಂದ ಇದು ಕುರಿಗಳ ಸಂರಕ್ಷಣೆಗಾಗಿ ಕುರುಬ ಹೋರಾಡಿ ಮಡಿದ ನಂತರ ಸತಿಸಹಗಮನ ಮಾಡಿರಬಹುದು. ಅಲ್ಲದೆ ಸೂರ್ಯ, ಚಂದ್ರಶಿಲ್ಪಗಳನ್ನು ಕೆತ್ತಿದ್ದಾರೆ. ಮಸರಕಲ್ಲು ಗ್ರಾಮದ ಮಠದ ಆವರಣದಲ್ಲಿರುವ ವೀರ ಮಹಾಸತಿಯ ಶಿಲ್ಪವನ್ನು ಕಪ್ಪು ಕಲ್ಲಿನಲ್ಲಿ ಕೆತ್ತಲಾಗಿದೆ. ರಾಜ ಕುದುರೆ ಮೇಲೆ ಕುಳಿತುಕೊಂಡು ಜಂಬೆ, ಎಡಗೈಯಲ್ಲಿ ಕುದುರೆಯ ಲಗಾಮು ಹಿಡಿದಿದ್ದಾನೆ. ಸೊಂಟದಲ್ಲಿ ಒಂದು ಕತ್ತಿಯಿದೆ. ಕಿವಿಯಲ್ಲಿ ಲೋಲಾಕು, ಕಾಲ್ಗಡಗ, ಕೂದಲುಗಳನ್ನು ಗಂಟು ಹಾಕಿ ತುರುಬನ್ನು ಕಟ್ಟಿದ್ದಾನೆ. ಮುಂದೆ ಸೇವಕನು ರಾಜಧ್ವಜ ಹಿಡಿದಿದ್ದಾನೆ. ಹಿಂದೆ ರಾಜಛತ್ರಿ ಇದೆ. ರಾಜನು ರಾಣಿಯಾದ ಸತಿಯು ಕುದುರೆ ಮೇಲೆ ಕುಳಿತುಕೊಂಡು ಕೈಯಲ್ಲಿ ಸಣ್ಣ ಖಡ್ಗ ಅದಕ್ಕೆ ನಿಂಬೆಹಣ್ಣು, ಎಡಕೈಯಲ್ಲಿ ಕನ್ನಡಿ ಹಿಡಿದಿದ್ದಾಳೆ. ಈಕೆಯು ಮುತ್ತಿನಸರ ಬಳೆಗಳನ್ನು, ಸೊಂಟದಲ್ಲಿ ಸೋಂಟದ ಪಟ್ಟಿಯನ್ನು ಹಾಕಿದ್ದಾಳೆ. ಮೇಲೆ ಒಂದು ನಾಯಿಯಿದೆ. ಒಬ್ಬ ಸೇವಕ ಬಲಗೈಯಲ್ಲಿ ಪಾರಿವಾಳ, ಎಡಗೈಯಲ್ಲಿ ನೀರಿನ ತಂಬಿಗೆ ಹಿಡಿದಿದ್ದಾನೆ. ಕೆಳಗಡೆ ಸೇವಕ ಮತ್ತೊಂದು ನಾಯಿಶಿಲ್ಪ ಹಾಗೂ ಸೂರ್ಯಚಂದ್ರ ಶಿಲ್ಪಗಳಿವೆ.

ಮಾನ್ವಿ ತಾಲೂಕಿನ ಮಲ್ಲಟ ಎಂಬ ಗ್ರಾಮದಲ್ಲಿನ ಊರ ಹೊರಗಿನ ಅಲ್ಲಮಪ್ರಭು ದೇವಾಲಯದಲ್ಲಿರುವ ಕಲ್ಲಿನ ಮೇಲಿನ ಆಸನದಲ್ಲಿ ಕಲ್ಯಾಣ ಚಾಳುಕ್ಯ ವಿಕ್ರಮನ ಕಾಲದಲ್ಲಿ ಅವನ

ಮಹಾಮಂಡಳೇಶ್ವರನಾಗಿ ಪಲ್ಲಟದ ಮಲ್ಲನೆಂಬುವವನಿದ್ದ. ಇವನ ತಂದೆ ಹಲ್ಲಗದೇವ ಮತ್ತು ತಾಯಿ ರೇಕಲದೇವಿ. ಈ ಮಲ್ಲನನ್ನು ಮಹಿಷ್ಮತೀಪುರವರಾಧೀಶ್ವರ, ಅಹಿಹಯ ವಂಶೋದ್ಭವ, ಅತ್ಯಗ್ರನರಸಿರ ದರ್ಪಣಧ್ವಜ, ಮಾಲಪರೆ ಘೋಷಣ, ನಾಲ್ಕು ಬಾಷೆಯ ಜಗಬಿರುದ ಮಂಡಳೀಕರ ಗಂಡ, ಶೌಚಗಾಂಗೇಯ, ಪರಾಂಗನ ಪುತ್ರ, ಮಲ್ಲಿಕಾರ್ಜುನ ದೇವರ ದಿವ್ಯ ಶ್ರೀಪಾದಾರಾಧಕ ಮುಂತಾದ ವೇಷಣಗಳಿಂದ ಕರೆಯಲಾಗಿದೆ. ಈ ಶಾಸನದಲ್ಲಿ ಮಲ್ಲನ ತಾಯಿಯನ್ನು ಮಹಾಸತಿ ರೇಕಲದೇವಿಯೆಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ.[೬೮] ಕಾಲ ಕ್ರಿ.ಶ.೨೧-೧೨-೧೧೯೬ ಪು.ಸಂ.೩೧೯

ಜಾಲಿಹಾಳು ಗ್ರಾಮ ಈಶ್ವರ ದೇವರ ಗುಡಿಯು ನವರಂಗದ ಗೋಡೆಯಲ್ಲಿನ ಶಾಸನದಲ್ಲಿ ತ್ರಿಭುವನಮಲ್ಲದೇವನ ಪೊನ್ನೂರ ಮಾಡದ ನೆಲೆವೀಡಿನಿಂದ ರಾಜ್ಯಭಾರ ಮಾಡುತ್ತಿದ್ದಾಗ ಎಡಪಳ್ಳಿಯನ್ನು ರಾಜಿಮಯ್ಯ ಎಂಬುವವನು ಆಳುತ್ತಿದ್ದಾಗ ಅವನ ಪತ್ನಿ ಜಕ್ಕಣಾಂಬೆ ಇವಳನ್ನು ಶಾಸನವು ಆ ರಾಜನ ಕುಲಲಲನೆ ಸುಧಾರೋಚಿವದನೆ ಬನ್ದುಚಿನ್ತಾಮಣಿ ಯಂಭೋರುಹದಳಾಕ್ಷಿ ಗುಣದೊಳು ಭೂಮಿಯ ಮಹಾಸತಿಯ ಜಕ್ಕಣಾಂಬಿಕೆ ಎಂದು ಹೋಗಳಲಾಗಿದೆ.[೬೯] ಕಾಲ ಕ್ರಿ.ಶ.೨೫-೧೨-೧೧೦೫, ಪು.ಸಂ.೩೮೧.

ಒಟ್ಟಾರೆಯಾಗಿ ಹೇಳಬೇಕೆಂದರೆ ಅಸಂಖ್ಯಾ ಊರುಗಳಲ್ಲಿ ಪೂಜೆ-ಪುನಸ್ಕಾರ ಪಡೆಯುತ್ತಿರುವ ಮಾಸ್ತಿಕಟ್ಟೆ, ಮಾಸ್ತಿಕಲ್ಲು ಮಹಾಸತಿಯ ದೇವಾಲಯಗಳಿವೆ. ಸತತ ರೋಗಗ್ರಸ್ಥರು, ಬಂಜೆಯರು, ಜೀವನದಲ್ಲಿ ಅತೀವ ಕಷ್ಟಕಾಪರಣ್ಯಗಳಿಗೆ ತುತ್ತಾದವರು, ಅವುಗಳ ಪರಿಹಾರಕ್ಕಾಗಿ ಮಹಾಸತಿಯರಿಗೆ ಹರಕೆ ಹೊತ್ತು ಪೂಜಿಸುತ್ತಾರೆ. ಮಾಸ್ತಿ ಕಲ್ಲುಗಳನ್ನು ರಾಯಚೂರು ಜಿಲ್ಲೆಯಲ್ಲಿಯೂ ವಿರಳವಾಗಿ ಕಾಣಬಹುದು. ಈ ಜಿಲ್ಲೆಯಲ್ಲಿ ಬರಹಸಹಿತ ಮಾಸ್ತಿಕಲ್ಲು ಇರುವವರೆವಿಗೂ ಯಾವುದೂ ದೊರೆತಿಲ್ಲ.

## ೪.೪. ವೀರ ರಮಣಿಯರು

ಪ್ರಾಚೀನ ಕಾಲದ ಸ್ತ್ರೀಯರ ಬಗ್ಗೆ ಮತ್ತು ಅವರ ಸಾಧನೆಗಳ ಬಗ್ಗೆ ತಿಳಿಯುವುದಕ್ಕೆ ಆ ಕಾಲದ ಶಿಲ್ಪಗಳು, ವರ್ಣಚಿತ್ರಗಳು ಮತ್ತು ಶಾಸನಗಳು ಸಹಾಯಕವಾಗುತ್ತವೆ. ಹಿಂದಿನ ಕಾಲದಲ್ಲಿ ವಿದೇಶಿಗಳಿಂದ ಬಂದ್ದಿದಂತಹ ಪ್ರವಾಸಿಗರು ಪ್ರತ್ಯಕ್ಷವಾಗಿ ನೋಡಿ, ತಿಳಿದು ಬರೆದು ಬಿಟ್ಟು ಹೋಗಿರುವಂತಹ ಸಾಹಿತ್ಯಾಧಾರಗಳು ಸಹ ಸಹಾಯಕವಾಗಿವೆ. ಸ್ತ್ರೀಯರು ಚಕ್ರವರ್ತಿಯ ಅಂಗರಕ್ಷಕರಾಗಿ ಅರಮನೆಗಳಲ್ಲಿ ಸೇವೆ ಸಲ್ಲಿಸುತ್ತಿದ್ದರು ಎಂಬುದನ್ನು ಚಂದ್ರಗುಪ್ತ ಮೌರ್ಯನ ಆಸ್ಥಾನದಲ್ಲಿದ್ದ ಗ್ರೀಕ್ ರಾಯಭಾರಿ ಮೆಗಸ್ತಾನೀಸ್, ತಿಳಿಸುತ್ತಾನೆ. ಕೌಟಿಲ್ಯ ತನ್ನ ಅರ್ಥಶಾಸ್ತ್ರದಲ್ಲಿಯೂ ಸಹ ಸ್ತ್ರೀಯರ ಬಗ್ಗೆ ತಿಳಿಸುತ್ತಾ ಬಿಲ್ಲು ಬಾಣಗಳನ್ನು ಹಿಡಿದ ಮಹಿಳಾಯೋಧರ ಬಗ್ಗೆ ಉಲ್ಲೇಖಿಸುತ್ತಾನೆ. ಸಾಮಾನ್ಯವಾಗಿ ಈ ಸ್ತ್ರೀಯರೆಲ್ಲರೂ ಖಡ್ಗ ಮತ್ತು ಗುರಾಣಿಗಳನ್ನು ಹಿಡಿಯುವ, ಮಲ್ಲಯುದ್ಧ ಮಾಡುವ ಸಾಮರ್ಥ್ಯ ಉಳ್ಳವರಾಗಿದ್ದರು.[೭೦]

ನಮ್ಮ ನಾಡು ಸದಾ ಸಂಸ್ಕೃತಿಯ ತೊಟ್ಟಿಲು ಈ ನಾಡಿನ ಸಂಸ್ಕೃತಿ, ನಾಗರೀಕತೆಯ ಸಂವರ್ಧನೆ, ವಿನಯಶೀಲ ಔದಾರ್ಯ, ಪರಾಕ್ರಮದಂತಹ ಸಂದರ್ಭಗಳಲ್ಲಿ ಪ್ರಮುಖವಾಗಿ ಪಾತ್ರವಾಡಿದಳು ಮಹಿಳೆ. ಧರ್ಮ, ಅರ್ಥ. ಕಾಮ, ಮೋಕ್ಷಗಳಲ್ಲಿ ಪುರುಷನ ಹೆಗಲಿಗೆ ಹೆಗಲು ಹಚ್ಚಿ ದುಡಿದು ಹೆಣ್ಣಾಗಿ ಹುಟ್ಟಿದ್ದಕ್ಕೆ ಜೀವನವನ್ನು ಸಾರ್ಥಕಪಡಿಸಿಕೊಂಡಿರುವವಳು. 'ತೊಟ್ಟಿಲ ತೂಗಿದ ಕೈ ದೇಶವನ್ನಾಳಿತು' ಗಾದೆಗೆ ಅರ್ಥ ತುಂಬಿರುವಳು. ಕಿತ್ತೂರು ರಾಣಿ ಚೆನ್ನಮ್ಮ, ಕೆಳದಿ ಚೆನ್ನಮ್ಮ, ಬೆಳವಡಿ ಮಲ್ಲಮ್ಮ, ಒನಕೆ ಓಬವ್ವ ಮತ್ತು ಅಬ್ಬಕ್ಕೆ ದೇವಿಯರು ಕನ್ನಡದ ಸಿರಿಯನ್ನು ಮೆರೆದ ಬೆಳ್ಳಿಚುಕ್ಕಿಗಳೆನಿಸಿದ್ದಾರೆ.[೭೧]

ಮಹಿಳೆಗೆ ರಾಜಕೀಯ ಕ್ಷೇತ್ರವು ಕೌಟುಂಬಿಕ ಕ್ಷೇತ್ರ, ಧಾರ್ಮಿಕ ಕ್ಷೇತ್ರ ಮತ್ತು ಸಾಮಾಜಿಕ ಕ್ಷೇತ್ರಗಳಷ್ಟು ಸುರಕ್ಷಿತವಾದುದಲ್ಲ. ಪ್ರಜಾಹಿತಕೋಸ್ಕರ ವೈರಿಗಳ ಕೂಡ ಸೆಣಸುವ, ಅಪಾಯಕಾರಿ ಜೀವನ ವ್ಯಾಪಾರವಾಗಿದ್ದಿತು. ಅಂದು ದೇಹಸಾಮರ್ಥ್ಯ, ಶೀಲ ಸಂರಕ್ಷಣೆಯ ದೃಷ್ಟಿಗಳಿಂದ ಮಹಿಳೆ ಇವುಗಳನ್ನು ನಿಲುಕಿಸಿಕೊಳ್ಳುವುದು ಕಷ್ಟವಾಗಿತ್ತು. ಹೀಗಿದ್ದರೂ ಕನ್ನಡ ಮಹಿಳೆಯರಲ್ಲಿ ರಣಭೈರವಿ ಅಕ್ಕದೇವಿಯಂತೆ ಒಬ್ಬಿಬ್ಬರು ಆಡಳಿತವನ್ನೇ ಮುಖ್ಯವಾದ ಉದ್ಯೋಗವನ್ನು ಮಾಡಿಕೊಂಡು, ಚಕ್ರವರ್ತಿಗಳು ಮಂಡಲೇಶ್ವರರು ಹತ್ತಾರು ಜನ ಮಡದಿಯರಿಗೆ ಉಪಜೀವನಕ್ಕಾಗಿ ಕೇಂದ್ರ ಊರುಗಳ ಆಡಳಿತವನ್ನು ನಿರ್ವಹಿಸಿಕೊಟ್ಟಿರುತ್ತಿದ್ದರು. ಪತಿ ಮರಣದಲ್ಲಿ ಅಪ್ರಾಪ್ತ ವಯಸ್ಸಿನ ಮಕ್ಕಳ ಜೀವನ ನಿರ್ವಹಣೆಯ ಜವಾಬ್ದಾರಿಯನ್ನು ಹೊತ್ತಿದ್ದಾರೆ. ಒಮ್ಮೊಮ್ಮೆ ತಮ್ಮ ಪತಿಗಳಿಗೆ ಸಹಚಾರಿಣಿಯಾಗಿ ನಿಲ್ಲುವ ಮೂಲಕವೋ ಸಂದಿಗ್ಧ ಸಂದರ್ಭಗಳಲ್ಲಿ ಅನೇಕ ಮಹಿಳೆಯರು ಆಡಳಿತದಲ್ಲಿಯೂ ವೀರತ್ವ-ಶಕ್ತಿ ಸಾಮರ್ಥ್ಯಗಳನ್ನು ಮೆರೆದಿರುವರು. ನಮ್ಮ ನಾಡಿನಲ್ಲಿ ರಾಜ ಶಾಸನಗಳನ್ನು ಬಿಟ್ಟರೆ, ಅಧಿಕ ಪ್ರಮಾಣದಲ್ಲಿ ಸಿಗುವ ಯುದ್ಧ ಶಾಸನಗಳು ಊರೂರಿಗೆ ಸಿಗುವ ವೀರಗಲ್ಲುಗಳೇ ಅಧಿಕ ಪ್ರಮಾಣದಲ್ಲಿವೆ.[೭೨]

ಹೋರಾಟದಲ್ಲಿ ಮಡಿದ ವೀರರಿಗೆ ವೀರಗಲ್ಲುಗಳನ್ನು ಹಾಕಿಸುತ್ತಿರುವಂತೆಯೇ ಯುದ್ಧ ಹಾಗೂ ಹೋರಾಟಗಳಲ್ಲಿ ಮಡಿದ ಮಹಿಳೆಯರಿಗೂ ವೀರಗಲ್ಲುಗಳನ್ನು ಹಾಕಿಸುತ್ತಿದ್ದರಿಂದ ಅವುಗಳನ್ನು ಮಹಿಳೆಯರ ಹೋರಾಟದ ವಿವರಗಳನ್ನುಳ್ಳ ವೀರಗಲ್ಲುಗಳೂ ಎಂದು ಕರೆಯುತ್ತಿದ್ದರು. ಉದಾಹರಣೆಗೆ ಸುಮಾರು ಹತ್ತನೆಯ ಶತಮಾನಕ್ಕೆ ಸೇರಿದ್ದು ಶ್ರವಣಬೆಳಗೋಳದ ಚಿಕ್ಕಬೆಟ್ಟದ ಮೇಲಿರುವ ಬಾಹುಬಲಿ ಬಸದಿಯ ಬಳಿ ಮಹಿಳೆಯರ ವೀರಗಲ್ಲೊಂದಿದೆವು. ವೀರಗಲ್ಲಿನ ಶಾಸನದ ಪಾಠ ಆಕೆಯ ಸಾವನ್ನು ತಿಳಿಸುವುದಾಗಿದೆ. ಆ ಶಾಸನ ತ್ರುಟಿತವಾಗಿದೆ. ಆದರೆ ಸಾವಿಯಬ್ಬೆ ಎಂಬುವವಳು ಬಗಿಯೂರಲ್ಲಿ ಸತ್ತಳು ಎಂದಿದೆಯಂತೆ. ಯಾವ ಹೋರಾಟದಲ್ಲಿ ಆಕೆ ಸತ್ತಳು ಎಂಬ ವಿವರಗಳಿಲ್ಲ. ಆಕೆಯನ್ನು ಕೀರ್ತಿಸುವ ಪದ್ಯಗಳು ದೊರೆಯುತ್ತವೆ. ಆ ಶಾಸನವು ಆಕೆಯ ಜೈನ ಧರ್ಮ ಶ್ರದ್ಧೆಯನ್ನು ವಿಶೇಷವಾಗಿ ಹೀಗೆ

ಕೀರ್ತಿಸುತ್ತದೆ. 'ಶ್ರಾವಕ ಧರ್ಮ್ಮದೊಳ್ ದೊರೆಯೆನಲ್ ಪೆರರಿಲ್ಲೆನೆ ಸನ್ದ ರೇವತಿಶ್ರಾವಕಿ ತಾನೇ ಸಜ್ಜನಿಕೆಯೊಳು ಜನಕಾತ್ಮಜೆ ತಾನೆ ರೂಪಿನೊಳ್ ದೇವಕಿ ತಾನೆ ಪೆಂಪಿನೊಳರುಂಧತಿ ತಾನೆ ಜಿನೇನ್ದ್ರ ಭಖ್ತಿ ಸದ್ಭಾವದೆ ಸಾವಿಯಬ್ಬೆ ಜಿನಶಾಸನ ದೇವತೆ ತಾನೆ ಕಾಣಿರೇ'. ಈ ವೀರಗಲ್ಲಿನ ಶಿಲ್ಪವು ಸಹ ಗಮನಾರ್ಹವಾಗಿದೆ. ಗಂಗರ ಕಾಲದ ಇತರೆ ವೀರಗಲ್ಲುಗಳಂತೆ ಈ ವೀರಗಲ್ಲನ್ನು ಬಿಳಿಯ ಬೆಣಚು ಕಲ್ಲಿನ ಮೇಲೆ ಕೆತ್ತಲಾಗಿದೆಂದು ಡಾ.ಆರ್.ಶೇಷಶಾಸ್ತ್ರಿಯವರು ಹೇಳಿದ್ದಾರೆ. ವೀರಗಲ್ಲನ್ನು ಮೂರು ಹಂತಗಳಲ್ಲಿ ಬಿಡಿಸಲಾಗಿದೆಯೆಂದು ಕೆಳಗಿನ ಹಂತದಲ್ಲಿ ಕುದುರೆಯ ಮೇಲೆ ಕುಳಿತ ಸಾವಿಯಬ್ಬೆ ತನ್ನೆದುರಿನ ಆನೆಯ ಮೇಲೆ ಕುಳಿತ ವೀರನೊಂದಿಗೆ ವೀರಾವೇಷದಿಂದ ಹೋರಾಡುತ್ತಿರುವಂತೆ ವಿವರನ್ನು ಬಿಡಿಸಲಾಗಿದೆ ಹಾಗೂ ಎರಡನೆಯ ಹಂತದಲ್ಲಿ ಸಾವಿಯಬ್ಬೆಯು ಪದ್ಮಾಸನದಲ್ಲಿ ಕುಳಿತು ಜಿನಧ್ಯಾನ ಮಾಡುತ್ತಿರುವಂತೆ ಬಿಡಿಸಲಾಗಿದೆ. ಮೇಲಿನ ಹಂತದಲ್ಲಿ ಸಾವಿಯಬ್ಬೆಯು ಹೋರಾಟದಲ್ಲಿ ಭಾಗವಹಿಸಿ, ಯುದ್ಧರಂಗದಲ್ಲಿ ಗಾಯಗೊಂಡು ಹಿಂತಿರುಗಿದಳು. ಆ ಗಾಯದಿಂದ ತನ್ನ ಸಾವು ಖಚಿತ ಎಂಬುದನ್ನು ಅರಿತ ಆಕೆ ತನ್ನ ಧರ್ಮದ ಸಲ್ಲೇಖನ ವ್ರತವನ್ನು ಸ್ವೀಕರಿಸಿ ಮಡಿದಿರಬಹುದು ಅಥವಾ ಜಿನಧರ್ಮದವಳಾದ ಈಕೆಯ ವೀರಗಲ್ಲನ್ನು ಬಿಡಿಸಿದ ಶಿಲ್ಪ ಹೋರಾಟದಲ್ಲಿ ಮಡಿದ ಸಾವಿಯಬ್ಬೆ ಜಿನಲೋಕವನ್ನು ಸೇರಿದಳು ಎಂಬುದನ್ನು ಈ ಮೂಲಕ ತಿಳಿಸಿರಬಹುದೆಂದಿದ್ದಾರೆ.[೭೩]

ಮತ್ತೊಂದು ವೀರಗಲ್ಲು ಶಿವಮೊಗ್ಗಾ ಜಿಲ್ಲೆಯ ಶಿಕಾರಿಪುರದಲ್ಲಿ ದೊರೆತಿದೆ. ಈ ಶಾಸನದ ಕಾಲ ಕ್ರಿ.ಶ.೧೪೪೬ ತನ್ನ ತಂದೆಯೊಡನೆ ಹೋರಾಡಿ ಆತನನ್ನು ಕೊಂದವರೊಡನೆ ಹೋರಾಡಿ ಮಡಿದ ಹರಿಯಕ್ಕನ ವೀರಗಲ್ಲು ಇದು. ಈ ವೀರಗಲ್ಲಿನ ಶಿಲ್ಪವೂ ಸಹ ತುಂಬಾ ಮಹತ್ವದಾಗಿದೆಂದು ಹಾಗೂ ತನ್ನ ಹಗೆಗಳನ್ನು ಹರಿಯಕ್ಕ ತುಂಬಾ ಆಕ್ರೋಶದಿಂದ ಕೊಲ್ಲುತ್ತಿರುವ ತನ್ನ ಜುಟ್ಟು ಆಕೆಯ ಕೈಯಲ್ಲಿ ಸಿಕ್ಕು ಒದ್ದಾಡುತ್ತಿರುವ ವ್ಯಕ್ತಿಯ ಚಿತ್ರವೂ ಮೂಡಿ ಬಂದಿದೆ.[೭೪]

### ೪.೫. ವೇಶ್ಯೆಯರು

ಹೆಣ್ಣು ಎಷ್ಟೇ ಗಹನಳಾದರೂ ಗಂಭೀರಳಾದರೂ ಹೊಗಳಿಕೆಗೆ ಬಹುಬೇಗ ಸೋಲುವ ಸ್ವಭಾವದವಳು. ಪುರುಷ ಹೆಣ್ಣಿನ ಈ ದುರ್ಬಲ ಗುಣವನ್ನು ತನ್ನ ಸ್ವಂತ ಸುಖ-ಸಂತೋಷಕ್ಕೆ ಚೆನ್ನಾಗಿ ಉಪಯೋಗಿಸಿಕೊಂಡ. ಹೊಗಳಿ ಹೊಗಳಿ ಆಕೆಯನ್ನು ತನ್ನ ರಾಣಿಯನ್ನಾಗಿ ಮಾಡಿಕೊಂಡ ಬುದ್ಧಿವಂತ ಪುರುಷ ತನ್ನೆಲ್ಲ ಪ್ರತಿಭೆಯನ್ನು ಉಪಯೋಗಿಸಿ, ನೀನೇ ಶೃಂಗಾರದ ರಸದೇವತೆ, ರತಿ ಎಂದೂ ಶಕ್ತಿದೇವಿ ಪಾರ್ವತಿ ಎಂದೂ, ಸಂಪತ್ತಿನ ಒಡತಿ ಲಕ್ಷ್ಮೀ ಎಂದೂ ಸಂಗೀತದ ರಸವಾಹಿನಿ ಸರಸ್ವತಿ ಎಂದೂ ಸಾಹಿತ್ಯ ಕಾವ್ಯದ ದೇವತೆ ಶಾರದೆ ಎಂದೂ ವಿಶೇಷ ರೀತಿಯಿಂದ ವರ್ಣಿಸಿದೆ.[೭೫]

ವಿವಾಹ ವ್ಯವಸ್ಥೆ ಉದಯವಾದಂದಿನಿಂದ ಅಸ್ತಿತ್ವಕ್ಕೆ ಬಂದ ಗೃಹಿಣಿ ಸಮಾಜದ ಜೊತೆ ಜೊತೆಯಲ್ಲಿಯೇ ವೇಶ್ಯೆವಾಟಿಕೆ ಬೆಳೆದು ಬಂದಿದೆ. ಜಗತ್ತಿನ ಬೇರೆ ಬೇರೆ ಭಾಗಗಳಂತೆ ಭರತ ಖಂಡದಲ್ಲಿಯೂ ವೇಶ್ಯಾವಾಟಿಕೆ ಪುರಾತನ ಕಾಲದಿಂದಲೂ ನಡೆದು ಬಂದ ಪದ್ಧತಿ. ಈ ವರ್ಗಕ್ಕೆ ಸಂಬಂಧಿಸಿದ ಸುಧಾರಣಾ, ಜಾರು, ನಟಿ, ಎಂಬಿ ಪದಗಳು ಋಗ್ವೇದದಲ್ಲಿ ಕಂಡುಬರುತ್ತದೆ. ಇವರು ಅಪ್ಸರೆಯ ವಂಶಜರು ಎಂದು ತಿಳಿಸುತ್ತದೆ. ಸ್ಕಂದಪುರಾಣದಲ್ಲಿ ದೇವತೆಗಳಿಗೂ ದಾನವರಿಗೂ ನಡೆದ ಯುದ್ಧದಲ್ಲಿ ಮಡಿದ ದೇವತೆಗಳ ಹೆಂಡಂದಿರು ದಾನವರ ಬಲತ್ಕಾರಕ್ಕೆ ಒಳಗಾಗಲು ಅವರಿಗೆ ದೇವೇಂದ್ರನು ನೀವು ಈಗ ಅರಮನೆಯಲ್ಲಿಯೂ, ದೇವಾಲಯಗಳಲ್ಲಿಯೂ ಭಕ್ತಿಯಿಂದ ವೇಶ್ಯಾಧರ್ಮ ವನ್ನನುಸರಿಸುತ್ತಾ ನಡೆಯಿರಿ ಎಂದು ಆದೇಶ ನೀಡಿದನೆಂದು ತಿಳಿಸುತ್ತದೆ. ಮತ್ಸ್ಯಪುರಾಣ, ವಾತ್ಸಯನನ ಕಾಮಸೂತ್ರ, ವಿಷ್ಣು ಮತ್ತು ಯಜ್ಞವಲ್ಕ್ಯ ಸಂಹಿತೆಗಳು, ಕೌಟಿಲ್ಯನ ಅರ್ಥಶಾಸ್ತ್ರ, ವೇಶ್ಯೆಯರ ಬಗೆಗೆ ವಿವರಗಳನ್ನು ಕೊಡುವುದುಂಟು. ಸಂಸ್ಕೃತ ಮತ್ತು ಕನ್ನಡ ಕಾವ್ಯಗಳಲ್ಲಿಯೂ ಇದಕ್ಕೆ ವಿಪುಲ ಉದಾಹರಣೆಗಳು ದೊರಕುತ್ತವೆ. ಆದರೆ ಪ್ರಾಚೀನ ಶಾಸನಗಳಲ್ಲಿ ಸಿಗುವ ಉಲ್ಲೇಖಗಳ ಬಲದಿಂದ ತಲತಲಾಂತರದಿಂದಲೂ ಹೆಣ್ಣು ಮಕ್ಕಳನ್ನು ದೇವರ ಹೆಸರಿನಲ್ಲಿ, ದೇವರಿಗಾಗಿ ದೇವದಾಸಿಯರನ್ನಾಗಿ ಬಿಡುವುದು ವ್ಯವಸ್ಥಿತವಾಗಿ ಆಚರಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಹಣಕ್ಕಾಗಿ ದೇಹಮಾರುವ ಇವರನ್ನು ವ್ಯಕ್ತಿಸೂಳೆ, ದೇವಸೂಳೆ ಮತ್ತು ಸಮಾಜಸೂಳೆ ಎಂದು ವರ್ಗೀಕರಿಸಲಾಗಿದೆ.[೨೬]

ದೇವದಾಸಿಯರೆಲ್ಲರೂ ವೇಶ್ಯೆಯರೇ ಆಗಿದ್ದರೂ ವೇಶ್ಯೆಯರೆಲ್ಲರೂ ದೇವದಾಸಿಯರಲ್ಲ. ದೇವಸ್ಥಾನದ ದತ್ತಿಗಳಲ್ಲಿ 'ಸೂಳೆ' ಎಂಬ ಮಾತು ಬಂದರೆ ಅದು ದೇವದಾಸಿಯನ್ನು ಸೂಚಿಸುತ್ತದೆ. ಬೇರೆಯ ಕಡೆ ಬಂದಾಗ ಅದು ವೇಶ್ಯೆಯರನ್ನು ಸೂಚಿಸುತ್ತದೆ. ದೇವದಾಸಿಯರ ವಿಷಯದಲ್ಲೂ ವೇಶ್ಯೆಯರ ವಿಷಯದಲ್ಲೂ ಶಾಸನಗಳಲ್ಲಿ ಸಾಕಷ್ಟು ಗೌರವ ಭಾವನೆಗಳಿವೆ. ಈಗ ಅವರಿಬ್ಬರಿಗಿರುವ ನಿಕೃಷ್ಟಸ್ಥಾನ ಆಗ ಇದ್ದಿರಲಾರದು. ದೇವದಾಸಿಯರ ಕುಲ, ಅವರು ದೇವದಾಸಿಯರಾಗಲು ಕಾರಣ, ದೇವದಾಸಿಯಾಗುವಾಗ ನಡೆಯುತ್ತಿದ್ದ ವಿಧಿಗಳು ಇತ್ಯಾದಿ ವಿಷಯಗಳ ಮೇಲೆ ಶಾಸನಗಳು ಸಾಕಷ್ಟು ಬೆಳಕು ಚೆಲ್ಲುವುದಿಲ್ಲ.[೨೨]

### ವ್ಯಕ್ತಿಸೂಳೆ

ವಿವಾಹಿತ ಇಲ್ಲವೆ ಅವಿವಾಹಿತ ಪುರುಷರು ಇಟ್ಟುಕೊಂಡ ಮಹಿಳೆಯರೇ ವ್ಯಕ್ತಿಸೂಳೆಯರು. ಇವರನ್ನು ವಂಶಪರಂಪರಾಗತ ಸೂಳೆಯರು, ವಂಶಪಾರಂಪರಾಗತವಲ್ಲದ ಸೂಳೆಯರೆಂದು ವರ್ಗೀಕರಿಸಬಹುದು. ವಂಶಪಾರಂಪರಾಗತವಲ್ಲದ ಸೂಳೆಯರೆಂದರೆ ಅವಿವಾಹಿತರು, ಗಂಡನನ್ನು

ಅಗಲಿರುವವರು ಮತ್ತು ವಿಧವೆಯರು ಎಂದು ವರ್ಗೀಕರಿಸಬಹುದು. ಗಂಡಿನ ದೌರ್ಜನ್ಯ, ಹೆಣ್ಣು ಗಂಡುಗಳ ದೌರ್ಬಲ್ಯ ಕಾರಣವಾಗಿ ಅಸ್ತಿತ್ವಕ್ಕೆ ಬಂದು ಗೌರವದ ಸೋಗಿನಲ್ಲಿ ಬೆಳೆದ ಪದ್ಧತಿಯದು. ಇಟ್ಟುಕೊಂಡ ಹೆಣ್ಣುಗಳ ಸಂಖ್ಯೆಯ ಮೇಲೆ ಸಮಾಜದಲ್ಲಿ ಪ್ರಾಪ್ತಿಯಾಗುವ ಗಂಡಿನ ಗಣ್ಯತೆಯೂ ಈ ಪದ್ಧತಿಯನ್ನು ಪೋಷಿಸಬಹುದು. ಇವರು ವ್ಯಕ್ತಿಯೋರ್ವನನ್ನೇ ನಂಬಿಕೊಂಡಿರುವ ಸ್ತ್ರೀಯರು.[೨೮]

ಪುರುಷವರ್ಗಕ್ಕೆ ಸಂಬಂಧಪಟ್ಟಂತೆ ಈ ಪದ್ಧತಿ ಪ್ರಾಬಲ್ಯ ಕೆಳವರ್ಗದವರಗಿಂತ ಮೇಲು ವರ್ಗದವರಲ್ಲಿ ಹೆಚ್ಚಾಗಿದ್ದಾರೆ. ಸ್ತ್ರೀವರ್ಗಕ್ಕೆ ಸಂಬಂಧಪಟ್ಟಂತೆ ಮೇಲುವರ್ಗಕ್ಕಿಂತ ಕೆಳವರ್ಗದವರಲ್ಲಿ ಹೆಚ್ಚು ಕಂಡುಬರುತ್ತದೆ. ಪ್ರಾಚೀನ ಕಾಲದ ಎಲ್ಲ ದರ್ಜೆಯ ಪುರುಷರು ಈ ಸೂಳೆವ್ಯವಸ್ಥೆಯನ್ನು ಪೋಷಿಸಿರುವ ಸಾಧ್ಯತೆ ಇದೆ. ಆದರೆ ಇದು ಎಷ್ಟೇ ಮನ್ನಣೆ ಪಡೆದಿದ್ದರೂ ಗೌರವದ ವಿಷಯವಲ್ಲದ ಕಾರಣ ಪ್ರಭುವರ್ಗ ಮತ್ತು ಉನ್ನತವರ್ಗಗಳಲ್ಲಿ ವ್ಯಕ್ತವಾಗಿ ಉಲ್ಲೇಖವಾಗಿದ್ದರೂ ಸಾಮಾನ್ಯವರ್ಗದಲ್ಲಿ ಉಲ್ಲೇಖವಾಗಲಿಲ್ಲವೆಂದೇ ಹೇಳಬಹುದು. ಇನ್ನೂ ಎಷ್ಟೋ ಸಲ ರೂಪ, ಯೌವ್ವನ ಅಧಿಕಾರ ಸಂಪತ್ತುಗಳಿಗೆ ಉರುಳಾದ ಮಹಿಳೆಯರು ಇದರಲ್ಲಿ ಸೇರ್ಪಡೆಯಾಗುತ್ತಿದ್ದರು. ಇವರೆಲ್ಲ ವಂಶಪರಂಪರಾಗತವಲ್ಲದ ಸೂಳೆಯರು. ರಾಜ ತನ್ನ ರಾಜ್ಯದ ಸರ್ವಸಂಪತ್ತುಗಳ ಪ್ರಭುವೂ ಹೌದು. ಪ್ರಜೆಗಳ ದೃಷ್ಟಿಯಲ್ಲಿ ದೇವನೂ ಹೌದು. ಹೀಗಾಗಿ ಭೋಗದ ವಸ್ತುಗಳೆಲ್ಲ ಅವನಿಗೆ ಅರ್ಪಿತವಾಗತೊಡಗಿದವು. ಅವುಗಳಲ್ಲಿ ಹೆಣ್ಣು ಒಂದು. ರಾಜನಿಗೆ ಸಂಬಂಧಿಸಿದ ಇಂಥ ಹೆಣ್ಣುಗಳು

೧. ರಾಜನೊಂದಿಗೆ ಪಟ್ಟವೇರಿದ ಪಿರಿಯರಸಿ ಪಟ್ಟಮಹಾದೇವಿ.

೨. ರಾಜಕೀಯ ಒತ್ತಡ, ಪ್ರತಿಷ್ಠೆ, ಸುಖಭೋಗ ಕಾರಣವಾಗಿ ಮದುವೆಯಾದ ಇತರ ರಾಣಿವರ್ಗ.

೩. ವಂಶಪರಂಪರಾಗತವಲ್ಲದ ಸೂಳೆಯರು.

೪. ವಂಶಪರಂಪರಾಗತ 'ಸೂಳೆವರ್ಗದವರು'

೫. ರಾಜನ ಅಂತಪುರಕ್ಕೇ ಸೇರಿದ ಪಾರಿಚಾರಿಕೆಯರು ಕಟಕ ಕಟಿ ಸೂತ್ರ ಕುಂಡಲ ಕೇಯೂರ ಹಾರಾಭರಣಾಲಂಕೃತ ಗಣಿಕಾಸಹಸ್ರ ಚಾಮರಾಂಧಕ್ಕಾರಾಧೂದೀರ್ಯವೀರ್ಯಮಾನ" ಎಂಬ ಶಾಸನ ವಾಕ್ಯದಿಂದ ಇವರ ಇನ್ನೊಂದು ಹೆಸರು 'ಗಣಿಕೆ'ಯರೆಂದು ಸ್ಪಷ್ಟವಾಗುತ್ತದೆ.

ಇವುಗಳಲ್ಲಿ ಅರಸನೊಂದಿಗೆ ಕಾಮಭೋಗದಿಂದಿರುವವರು ಮೇಲಿನ ನಾಲ್ಕು ವರ್ಗದವರು. ಇವರಲ್ಲಿಯೇ ಮೂರು ಮತ್ತು ನಾಲ್ಕನೆಯ ವರ್ಗದವರು ಮಾತ್ರ ಸೂಳೆಯರು. ನಮ್ಮ ಶಾಸನಗಳು ಅರಸನಿಗೆ ಬಳಸುವ 'ವಿಕಟಚಕ್ರವರ್ತಿ', ವೇಶ್ಯಾಭುಜಂಗ 'ಊರ ವಧೂತಜನಕಾಮ' ಇತ್ಯಾದಿ ವಿಶೇಷಣಗಳು

ಕೇವಲ ಸಾಂಪ್ರದಾಯಿಕ ಹೇಳಿಕೆಗಳಾಗಿರಬೇಕು. ಇಲ್ಲವೇ ವಂಶಪರಂಪರಾಗತ ಸೂಳೆಯರೊಂದಿಗೆ ಸಂಬಂಧವಿರಿಸಿಕೊಂಡಿದ್ದನ್ನು ಸೂಚಿಸುತ್ತದೆ. ಸೂಳೆ ರಾಜನ ಭೋಗ ವಸ್ತುಗಳ ಪಟ್ಟಿಯಲ್ಲಿ ಅದ್ವಿತೀಯಳು. ಪಟ್ಟಾಭಿಶಕ್ತ ರಾಣಿಯ ಇನ್ನುಳಿದ ರಾಣಿವರ್ಗದ ಸಾಮಾನ್ಯ ಅಂತಸ್ತು ಇಲ್ಲದಿದ್ದರೂ ರಾಜನ ಮನಕ್ಕೆ ಅತ್ಯಂತ ಸಮೀಪದ ವ್ಯಕ್ತಿಯವಳು. ರಾಜನ ಜೀವನದ ಒಂದು ಅವಿಭಾಜ್ಯ ಅಂಗವೆಂಬಂತೆ ಬಾಳಿದ ಇವರಿಗೆ ರಾಣಿವಾಸದ ಮಹಿಳೆಯರಿಗೆ ಇದ್ದ ಎಲ್ಲ ಸವಲತ್ತು ಸೌಕರ್ಯಗಳು ಸಲ್ಲುತ್ತಿರಬೇಕೆಂದು ಹೇಳಿದ್ದಾರೆ. ಹೀಗೆ ರಾಜವ್ಯಕ್ತಿಗಳ ಸೂಳೆಯನ್ನು ಮುಕ್ತವಾಗಿ ಉಲ್ಲೇಖಿಸುವಂತೆ ಶಾಸನಗಳು ಇಲ್ಲಿಂದ ಕೆಳಗಿನ ವರ್ಗದ ವ್ಯಕ್ತಿಗಳ ಸೂಳೆಯರನ್ನು ಉಲ್ಲೇಖಿಸುವುದಿಲ್ಲ.

**ದೇವಸೂಳೆ**

ತಲ-ತಲಾಂತರದಿಂದಲೂ ಹೆಣ್ಣು ಮಕ್ಕಳನ್ನು ದೇವರ ಹೆಸರಿನಲ್ಲಿ, ದೇವರಿಗಾಗಿ, ದೇವರ ಭೋಗಕ್ಕೆ ಒಪ್ಪಿಸಲ್ಪಟ್ಟವಳು ದೇವಸೂಳೆ. ಬಸವಿ ಬಿಡುವ, ಸೂಳೆ ಬಿಡುವ ಪದ್ಧತಿಯನ್ನು ವ್ಯವಸ್ಥಿತವಾಗಿ ಆಚರಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ದೇವಸೂಳೆಯರು ಅಜನ್ಮಪರ್ಯಾತ ದೇವನ ಅನನ್ಯ ಸೇವೆಗೈಯುತ್ತಾ ಬಾಳಬೇಕಿತ್ತು. ಸುಂದರಿಯರಾದ ಇವರು ಸಂಗೀತ ನೃತ್ಯವನ್ನು ಮಾಡಬೇಕಾಗುತ್ತಿತ್ತು. ಆ ಸೇವೆಯನ್ನು ದೇವರಿಗೆ ಅರ್ಪಿಸುವುದರ ಮೂಲಕ ಅವರು ದೇವದಾಸಿಯರಾಗುತ್ತಿದ್ದರು.

ವರ್ಣವ್ಯವಸ್ಥೆಯಲ್ಲಿಯೂ ಹೇಗೆ ಬ್ರಾಹ್ಮಣ ಪುರುಷನೊಬ್ಬ ತನ್ನ ಹಾಗೂ ಇತರ ಮೂರು ವರ್ಗಗಳಲ್ಲಿಯೂ ಹೆಣ್ಣನ್ನು ಆತ ಮದುವೆಯಾಗಬಹುದೆಂದು ಶಾಸನ ಮಾಡಿದನೋ ಅದೇ ರೀತಿ ಶೂದ್ರ ಹರಿಜನ, ಗಿರಿಜನ, ಹೆಣ್ಣು ಮಕ್ಕಳು ಮಿಶ್ರ ದೇವದಾಸಿಯರಾಗುವಂತೆ ಶಾಸನ ಹೊರಡಿಸಿಗೆ. ಜಗತ್ತಿನ ಬಹುಕಾಲದಿಂದಲೂ ಬೆಳೆದುಬಂದ ಪದ್ಧತಿ ಇದು. ಪ್ರಾಚೀನ ಈಜಿಪ್ಟ್ , ಸಿರಿಯ, ಅರೇಬಿಯ ಮುಂತಾದ ಮಧ್ಯಪ್ರಾಚ್ಯದೇಶಗಳಲ್ಲಿ ಬಳಕೆಯಲ್ಲಿದ್ದ ಈ ಪದ್ಧತಿ ಪಶ್ಚಿಮ ಆಫ್ರಿಕದ ಕೆಲವು ಜನಾಂಗಗಳಲ್ಲಿ ಇನ್ನು ರೂಢಿಯಲ್ಲಿದೆ.[೨೯]

ದೇವದಾಸಿ ಸಂಪ್ರದಾಯ ಭಾರತದಲ್ಲಿ ಪ್ರಚಾರಕ್ಕೆ ಬಂದುದು ಇತ್ತೀಚೆಗೆ ಎಂದು ಡಾ. ಅಲ್ಟೇಕರರು ತಿಳಿಸುತ್ತಾರೆ. 'ಜಾತಕ ಸಾಹಿತ್ಯ' ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಇದರ ಉಲ್ಲೇಖವಿಲ್ಲ. ಕ್ರಿ.ಶ.೩ನೇ ಶತಮಾನದಿಂದ ಈ ಪದ್ಧತಿ ಪ್ರಾರಂಭವಾಗಿರಬೇಕು. ದೇವಪೂಜೆಯ ಕಾಲಕ್ಕೆ ವಾದ್ಯ ಮತ್ತು ಸಂಗೀತ ಸೇವೆಗೆ ಸ್ತ್ರೀಯರನ್ನು ನಿಯಮಿಸಿಕೊಳ್ಳಬೇಕೆಂದು, ಖರೀದಿಸಬೇಕೆಂದು ಕೆಲವು ಪುರಾಣಗಳ ಅಭಿಪ್ರಾಯ. ಸೂರ್ಯ ದೇವಸ್ಥಾನಕ್ಕೆ ವೇಶ್ಯೆಯರನ್ನು ಒದಗಿಸಿದರೆ ಸೂರ್ಯಲೋಕ ದೊರಕುವುದೆಂದು ಭವಿಷ್ಯ ಪುರಾಣ ತಿಳಿಸುತ್ತದೆ."

ಭರತ ಖಂಡದಲ್ಲಿ ಒಂದು ಕಾಲಕ್ಕೆ ಎಲ್ಲ ಕಡೆಗೂ ವ್ಯಾಪಿಸಿದ್ದ ಪದ್ಧತಿಯಿದು. ಮಹಾರಾಷ್ಟ್ರದಲ್ಲಿ 'ಬಾಮಿನಿ' ಎಂದು ಉತ್ತರ ಭಾರತದಲ್ಲಿ 'ಮಂಗಳಮುಖಿ'ಯರೆಂದು, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 'ಕೊತಾಡುವ ಬಾಕನೆಂಗೆ'ಯರೆಂದು ಇವರನ್ನು ಕರೆಯುತ್ತಿದ್ದರು. ಉಜ್ಜಯನಿಯ ಮಹಾಕುಲ ದೇವಸ್ಥಾನದ ಸಂಜೆಯ ಪೂಜೆಯ ವೇಳೆಯಲ್ಲಿ ದೇವದಾಸಿಯರಿದ್ದಂತೆ ಕವಿ ಕಾಳಿದಾಸ ತಿಳಿಸುತ್ತಾನೆ. ಕಾಶ್ಮೀರದಲ್ಲಿ ಕ್ರಿ.ಶ.೭ನೇ ಶತಮಾನದಲ್ಲಿ ಈ ಪದ್ಧತಿ ವ್ಯಾಪಕವಾಗಿ ನೆಲೆನಿಂತಿದ್ದನ್ನು ರಾಜತರಂಗಿಣಿ ತಿಳಿಸುತ್ತದೆ. ಗುಜರಾತದ ಪ್ರಸಿದ್ಧ ಸೋಮನಾಥ ದೇವಾಲಯದಲ್ಲಿ ಐನೂರು ನರ್ತಕಿಯರಿದ್ದರು. ತಾಂಜಾವೂರಿನ ರಾಜನು ದೇವಸ್ಥಾನವನ್ನು ನಿರ್ಮಿಸಿ ದೇವರ ಸೇವೆಗಾಗಿ ನಾಲ್ಕು ನೂರು ಜನ ನರ್ತಕಿಯರನ್ನು ಒದಗಿಸಿದ್ದನೆಂದು ತಿಳಿದುಬರುತ್ತದೆ.

ಪ್ರಾಚೀನ ಕಾಲದಲ್ಲಿ ದೇವಸ್ಥಾನ ಒಂದು ಸಾಮಾಜಿಕ ಸಂಸ್ಥೆಯೆನಿಸಿಕೊಂಡಿದ್ದಿತು. ಇದರ ಆಡಳಿತ ನಿರ್ವಹಣೆಗೆ ಒಂದು ಸುಸಂಘಟಿತವಾದ ವ್ಯವಸ್ಥೆ ಇದ್ದು, ಇದು ಪೂಜಾರಿಯಿಂದ ಮೊದಲ್ಗೊಂಡು ರೂವಾರಿಯವರೆಗೆ ಹರಡಿಕೊಂಡಿತ್ತು. ಇಲ್ಲಿಯವರೆಗೆ ಕೇವಲ 'ಸೂಳೆ' ಎಂಬ ಶಬ್ದವನ್ನು ಬಳಸಿಕೊಂಡು ಸಾಮೂಹಿಕವಾಗಿ ಬೆಳೆದುಬಂದ ಈ ಪರಂಪರೆ ೧೧ನೆಯ ಶತಮಾನದಲ್ಲಿ ಅಂಗಭೋಗ, ರಂಗಭೋಗವೆಂದು ಕವಲೊಡೆಯಿತೆಂದು ತಿಳಿದುಬರುತ್ತದೆ.[೮೦]

## ಅಂಗಭೋಗ

ದೇವರ ಅಂಗಕ್ಕೆ ಸಂಬಂಧಪಟ್ಟ ಸ್ನಾನ, ಪೂಜೆ, ನೈವೇದ್ಯ, ತಾಂಬುಲಗಳ, ಸಮರ್ಪಣಾಕಾರ್ಯ ಅಂಗಭೋಗದವರ ಕರ್ತವ್ಯವಾಗಿರುತ್ತಿತ್ತು. ರಂಗಭೋಗದ ಸೂಳೆಯರಿಗಿಂತ ಇವರಿಗೆ ಕೊಟ್ಟ ದಾನಪ್ರಮಾಣ ಅಧಿಕವಾಗಿರುವುದರಿಂದ ಇವರು ಅವರಿಗಿಂತ ಸ್ವಲ್ಪಮೇಲ್ಮಟ್ಟದವರಾಗಿರಬೇಕು. ದೇವಸ್ತಾನಕ್ಕೆ ಅವರ ಅಂತಸ್ತು. ಅಲ್ಲಿರುವ ಉಪಗರ್ಭಗೃಹಗಳ ಸಂಖ್ಯೆಗಳಿಗೆ ಅನುಗುಣವಾಗಿ ಈ ಸೂಳೆಯರ ಸಂಖ್ಯೆ ಹೆಚ್ಚು ಕಡಿಮೆಯಾಗುತ್ತಿದ್ದಿತು. ನಮಗೆ ತಿಳಿದ ಮಟ್ಟಿಗೆ ಬಾಗಳಿ, ಬೇಚೂರು ಗ್ರಾಮಗಳಲ್ಲಿ ೧೨ ಜನ ಅಂಗಭೋಗದ ಸೂಳೆಯರಿದ್ದರೆಂಬ ಉಲ್ಲೇಖವೇ ಅತಿದೊಡ್ಡ ಸಂಖ್ಯೆಯದಾಗಿದೆ. ಗರ್ಭಗೃಹದ ಸೂಳೆಯರಿಗೆ ಹೆಚ್ಚಿನ ಪ್ರಾಮುಖ್ಯತೆ ಇದ್ದು ಎಡ, ಬಲ, ಇಲ್ಲವೆ ಎದುರಿನ ಗರ್ಭಗೃಹದ ಅಂಗಭೋಗ ಸೂಳೆಯರಿಗೆ ಮಾತ್ರ ರಂಗಭೋಗ ಸೂಳೆಯರ ಸಮಾನಸ್ಥಾನವಿದ್ದಿತೆಂದು ದಾನಪ್ರಮಾಣದ ಬಲದಿಂದ ಊಹಿಸಬಹುದು. ಶಾಸನಗಳಲ್ಲಿ ಕೆಲವು ಸಲ ಕೇವಲ 'ಭೋಗದ ಸೂಳೆ' ಎಂಬ ಉಲ್ಲೇಖ ಬರುತ್ತಿದ್ದು ಇವರು ಅಂಗಭೋಗದವರೋ ರಂಗಭೋಗದವರೋ ನಿರ್ಣಯಿಸುವುದು ಕಷ್ಟ ಎಂದು ಡಾ.ಚೆನ್ನಕ್ಕ ಎಲಿಗಾರವರು ಹೇಳಿದ್ದಾರೆ. ಆದರೆ ಅಂಗಭೋಗದ ಸೂಳೆಗೆ ತೆರೆಯ ಮರೆಯ ಸೂಳೆ, ತೆರೆಯೊಳಗೆ

ಬಿಟ್ಟಿ ಸೂಳೆ, ಪಿರಿಯರವಾಳ ಸೂಳೆ, ಪೆರ್ಗಡೆವಾಳ ಸೂಳೆ, ಪರುಕೆರಗ ಭೋಗದ ಸೂಳೆಯರೆಂಬ ಪರ್ಯಾಯ ನಾಮಗಳನ್ನು ಶಾಸನಗಳು ಬಳಸಿರುವುದುಂಟು.[೮೧]

**ರಂಗಭೋಗ :** ದೇವಸ್ಥಾನದ ಗರ್ಭಗೃಹ ಮುಂಭಾಗವಾದ ನವರಂಗ ಅಥವಾ ರಂಗಮಂಟಪದಲ್ಲಿ ನಡೆಸುವ ದೇವರಸೇವೆಗೆ ರಂಗಭೋಗವೆಂದು ಹೆಸರು. ರಂಗಭೋಗದ ಕಾರ್ಯ ಹತ್ತಾರು ಬಗೆಗಳಲ್ಲಿ ನಡೆಯುತ್ತಿದ್ದಿತು. ಇದರಲ್ಲಿ ಕಂಬದ, ಮಾಡದ, ಚಾಮರದ, ಪಾತ್ರದ, ಓಲಗದ ಕೇರಿಯ ಸೂಳೆಯರ ಕಾರ್ಯಗಳು ಮುಖ್ಯವೆನಿಸಿದ್ದವು. ದೇವಾಲಯದ ಮೊದಲ ಆಕರ್ಷಣೆಯೆಂದರೆ ಈ ರಂಗಭೋಗದ ಸೂಳೆಯರೆ.

**ಕಂಬದ ಸೂಳೆ :** ರಂಗಭೋಗದ ಸೂಳೆಯರಲ್ಲಿ ಮಹತ್ವದ ಒಂದಂಗ ಈ ಕಂಬದ ಸೂಳೆಯರು. ದೇವಸ್ಥಾನದ ರಂಗಮಂಟಪದ ಅಲಂಕಾರಕ್ಕೋಸುಗ ಅಲ್ಲಿಯ ಕಂಬಗಳ ಹತ್ತಿರ ಒಬ್ಬಿಬ್ಬರು ಪೂಜೆ ಮುಗಿಯುವವರೆಗೆ ಅಲಂಕಾರ ಮಾಡಿಕೊಂಡು ನಿಲ್ಲುವುದು ಇವರ ಕಾರ್ಯವಾಗಿತ್ತು.

**ಮಾಡದಸೂಳೆ :** ಶಾಸನಗಳಲ್ಲಿ ಅತ್ಯಂತ ಕಡಿಮೆಯಾಗಿ ಕಂಡುಬರುವವಳು ಮಾಡದಸೂಳೆ. ಇಲ್ಲಿಯ ಮಾಡ ಎಂಬ ಪದಕ್ಕೆ ಮಹಡಿ ಎಂಬ ಅರ್ಥವಿರದೆ ದೇವಾಲಯದಲ್ಲಿರುವ 'ಗೂಡು' ಎಂಬ ಅರ್ಥವೇ ಇರಬೇಕು. ದೇವಸ್ಥಾನಗಳ ಗರ್ಭಗೃಹದ ಎಡಬಲ ಪಕ್ಕಗಳಲ್ಲಿ ಈ ಮಾಡಗಳು ಕಂಡುಬರುತ್ತವೆ. ಇವುಗಳ ಹತ್ತಿರ ಅಲಂಕಾರಕ್ಕಾಗಿ ನಿಂತುಕೊಳ್ಳುವ ಸೂಳೆಯರನ್ನು ಶಾಸನಗಳು 'ಮಾಡದ' ಸೂಳೆಯರೆಂದು ಕರೆದಿರಬೇಕೆನಿಸುತ್ತದೆ.

**ಚಾಮರದ ಸೂಳೆ :** ದೇವರಿಗೆ ಚಾಮರದ ಸೇವೆ ಕೈಗೊಳ್ಳುವವಳು ಚಾಮರದ ಸೂಳೆ. ಇವಳು ರಂಗಮಂಟಪದ ಮಿಕ್ಕ ಕಂಬಗಳ ಸಮೀಪದಲ್ಲಿ ನಿಲ್ಲುತ್ತಿದ್ದಳೋ ಅಥವಾ ಗರ್ಭಗೃಹದ ಸಮೀಪದಲ್ಲಿ ನಿಲ್ಲುತ್ತಿದ್ದಳೋ ಹೇಳುವುದು ಕಷ್ಟವಾಗಿದೆ.

**ಪಾತ್ರದ ಸೂಳೆ :** ದೇವಸ್ಥಾನದ ಕಾರ್ಯವ್ಯವಸ್ಥೆಯಲ್ಲಿ ಅಂಗರಂಗವೆಂದು ಎರಡು ಭಾಗಗಳಾಗಲು ರಂಗದಲ್ಲಿ ಹೆಚ್ಚಿನ ಪ್ರಮುಖ್ಯತೆ ಪಡೆದವಳೂ ಪಾತ್ರದ ಸೂಳೆ. ವಾರವಿಲಾಸಿನೀ ವಿರಚಿತ ನೃತ್ಯಗೀತ ವಾದ್ಯವನ್ನು ಉಲ್ಲೇಖಿಸುವ ಮಣ್ಣೆ ತಾಮ್ರಪಟ (ಕ್ರಿ.ಶ.೮೦೨) ಈ ಸೂಳೆಯರನ್ನು ಸ್ಪಷ್ಟವಾಗಿ ಸೂಚಿಸುವ ಪ್ರಾಚೀನ ದಾಖಲೆಯಾಗಿದೆ.

**ಓಲಗದ ಸೂಳೆ :** ದೇವನ ಪ್ರೀತ್ಯರ್ಥವಾಗಿ ಸಂಗೀತ ಸೇವೆ ಸಲ್ಲಿಸುವವರನ್ನು ಶಾಸನಗಳು ಓಲಗ ಸೂಳೆಯರೆಂದೂ, ಪಾಡುವವರು ಎಂದೂ ಕರೆದಿವೆ. ಗಾಂಧರ್ವ ಶಬ್ದ ಈ ಸಭೆಯನ್ನೇ ಸೂಚಿಸುತ್ತಿರಬೇಕು. ದೇವಸ್ಥಾನದ ನರ್ತಕವರ್ಗದವರಿಗೆ ಹಿಮ್ಮೇಳದ ಸಂಗೀತವನ್ನು ಒದಗಿಸಲೋ ಅಥವಾ ಸ್ವತಂತ್ರ ಸಂಗೀತ ಸಭೆಗೋ ಈ ಸಮುದಾಯವನ್ನು ನಿಯೋಜಿಸುತ್ತಿರಬೇಕು.[೮೨]

**ಸಮಾಜಸೂಳೆ :** ದೇವರ ಭೋಗಕ್ಕೆ ಒಪ್ಪಿಸಲ್ಪಟ್ಟವಳು ದೇವಸೂಳೆಯಾದರೆ, ಸಾರ್ವಜನಿಕ ಮುಕ್ತಭೋಗಕ್ಕೆ ಒಪ್ಪಿಕೊಂಡವಳು ಸಮಾಜಸೂಳೆ. ಧರ್ಮ ಮತ್ತು ಪ್ರತಿಷ್ಠೆ ಹೆಸರಿನಲ್ಲಿ ಕ್ರಮವಾಗಿ ದೇವಸೂಳೆ ಮತ್ತು ವ್ಯಕ್ತಿಸೂಳೆಯರು ಬೆಳೆದಂತೆ ಸಾರ್ವಜನಿಕ ಕಾಮತೃಪ್ತಿಯ ಅವಶ್ಯಕತೆಗನುಗುಣವಾಗಿ ಈ ಸಮಾಜ ಸೂಳೆಯರು ಬೆಳೆದು ನಿಂತರು. ದೇವಸೂಳೆ, ವ್ಯಕ್ತಿಸೂಳೆಯರು ಕೆಲವೊಮ್ಮೆ ಇದರಲ್ಲಿ ಸೇರಿಕೊಂಡಿದ್ದಾರೆಂದರೆ ಆಶ್ಚರ್ಯವೇನಿಲ್ಲ. ಸಮಾಜ ಅನಿವಾರ್ಯ ಅಂಗವೆಂಬಂತೆ ಈ ಸಮಾಜ ಸೂಳೆಗಾರಿಕೆ ಬೆಳೆದು ಬಂದಿದೆ. ಶಮನಗೊಳ್ಳದ ಮಾನವನ ಕಾಮ ಸೂಳೆಗೇರಿಯ ಆಶ್ರಯವಿರದಿದ್ದರೆ ಹುಚ್ಚಾಗಿ ಹರಿದು ಗೃಹಸ್ಥ ಸಮಾಜದ ಸ್ವಾಸ್ಥ್ಯವನ್ನೇ ಅಲುಗಿಸಬಹುದಿತ್ತು. ಈ ದಿಶೆಯಲ್ಲಿ ಸಮಾಜ ಸೂಳೆಯರು ಅವಶ್ಯಕವೆಂದೇ ಹೇಳಬಹುದು. ಪ್ರಾಚೀನ ಶಾಸನಗಳಲ್ಲಿ ಸಮಾಜ ಸೂಳೆಯರ ಉಲ್ಲೇಖ ಬಾರದೆ ಹೋದರೂ ಕಾವ್ಯಗಳು ಮಾತ್ರ ಇವರ ಬಗೆಗೆ ಸವಿಸ್ತಾರವಾಗಿ ತಿಳಿಸುತ್ತವೆ. ಕವಿರಾಜಮಾರ್ಗದ ಕಾಲದಲ್ಲಿ ಬರುವ 'ವರವಾರನಾರಿಯರ್ೋ ನೆರೆದೆ' ಎಂಬ ಮಾತು ಈ ಸಾಮಾನ್ಯ ವೇಶ್ಯಾಪದ್ಧತಿಯನ್ನೇ ಸೂಚಿಸುತ್ತಿರಬೇಕು. ಸುಂದರ ಸ್ತ್ರೀಯರಾದ ಈ ಸೂಳೆಯರಿಗಾಗಿ ಒಳಜಗಳ, ಪೆಣ್ಬುಯಲಂತಹ ಪ್ರಸಂಗಗಳು ಘಟಿಸುತ್ತಿರುವ ಸಾಧ್ಯತೆಯಿದೆ. ಎದೆಉಬ್ಬೆ ಎಂಬ ಸೂಳೆಯನ್ನು ಕದ್ದೊಯ್ದ ವಿಷಯವೊಂದು ಶಾಸನದಲ್ಲಿ ಉಲ್ಲೇಖಕೊಂಡಿರುವುದನ್ನು ನೋಡಬಹುದು. ಶಾಸನಗಳಲ್ಲಿ ಇವರ ಬಗೆಗೆ ಹೆಚ್ಚಿನ ವಿಷಯ ತಿಳಿದುಬರದಿದ್ದಕ್ಕೆ ಈ ಪದ್ಧತಿಯ ಬಗ್ಗೆ ಇದ್ದ ಕಿಳು ಮನೋಭಾವ ಮತ್ತು ಇವರು ಉಲ್ಲೇಖಯೋಗ್ಯ ಕಾರ್ಯನಿರ್ವಹಿಸುವುದೇ ಕಾರಣವಾಗಿರಬೇಕು.[೮೩]

ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನ ಗಬ್ಬೂರು ಗ್ರಾಮದಲ್ಲಿ ಸೂಳೆ ಹೇಮವ್ವೆಯು ಜಡೇಶ್ವರ ದೇವರಿಗೆ ಕ್ರಿ.ಶ.೧೧೪೮ರಲ್ಲಿ ದೇವರ ಪೂಜೆ, ಪುನಸ್ಕಾರ ನೈವೇದ್ಯಕ್ಕೆಂದು ಊರಿನ ಭಕ್ತಾದಿಗಳ ಜೊತೆಗೆ ಇವಳು ಒಂದು ಹಣವನ್ನು ದಾನ ಮಾಡಿದ ಉಲ್ಲೇಖವಿದೆ. ಅದೇ ರೀತಿಯಾಗಿ ವೇಶ್ಯೆ ಕಂಚಗಾರಮ್ಮ ಎಂಬುವವಳು ಅಲ್ಲಮ ಪ್ರಭುಸ್ವಾಮಿಯ ಗುಡಿಗೆ ಗಂಟೆಯನ್ನು ಮಾಡಿಸಿದ ಉಲ್ಲೇಖವಿದೆ. ದೇವದುರ್ಗದ ಗೂಗಲ ಎಂಬ ಗ್ರಾಮದ ಶಾಸನವು ಉಲ್ಲೇಖಿಸಿದೆ.

ಒಟ್ಟಾರೆಯಾಗಿ ಹೇಳಬೇಕೆಂದರೆ ಸಮಾಜದಲ್ಲಿ ಸೂಳೆಯರೂ ಗೌರವ ಸ್ಥಾನಮಾನಗಳನ್ನು ಪಡೆದಿದ್ದರೆಂದು ಶಾಸನದಿಂದ ತಿಳಿದುಬರುತ್ತದೆ. ನಮ್ಮ ದೇಶದಲ್ಲಿ ವೇಶ್ಯೆ ಪದ್ಧತಿ ಬೆಳೆದು ಬಂದುದಕ್ಕೆ ಪ್ರಾಚೀನ ಕಾಲದ ಇತಿಹಾಸವೇನೆ ಇದ್ದರೂ ಇಂದು ಮಾತ್ರ ಅದು ಬಡತನದೊಂದಿಗೆ ನೇರ ಸಂಬಂಧವನ್ನು ಹೊಂದಿದೆ. ಕೆಳವರ್ಗದವರ ಪಾಲಿಗಂತು ಇದು ಒಂದು ಶಾಪವಾಗಿದೆ.

**ಅಡಿಟಿಪ್ಪಣಿಗಳು**

೧. ಮೃತ್ಯುಂಜಯ ಹೊರಕೇರಿ(ಸಂ), ರಾಯಚೂರು ಜಿಲ್ಲಾದರ್ಶನ, ಪು.೪೨

೨. ಅದೇ, ಪು.೪೩

೩. ಪದ್ಮಾ ಎಂ., *ವಿಜಯನಗರ ಶಾಸನಗಳಲ್ಲಿ ಮಹಿಳೆ,* ವಿಜಯನಗರ ಅಧ್ಯಯನ ಸಂಪುಟ ೧, ಪು.೭೬

೪. ದೇವರಾಕೊಂಡಾರೆಡ್ಡಿ(ಸಂ), ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೭, ಪು.೬

೫. ಅದೇ, ಪು.೩೩

೬. ಅದೇ, ಪು.೯೯

೭. ಅದೇ, ಪು.೪೫

೮. ಅದೇ, ಪು.೫೭

೯. ಅದೇ, ಪು.೮೧

೧೦. ಅದೇ, ಪು.೯೩

೧೧. ಅದೇ, ಪು.೧೧೪

೧೨. ಅದೇ, ಪು.೧೭೮

೧೩. ಅದೇ, ಪು.೨೩೯

೧೪. ಅದೇ, ಪು.೨೪೮

೧೫. ಅದೇ, ಪು.೨೬೨

೧೬. ಅದೇ, ಪು.೨೭೫

೧೭. ಅದೇ, ಪು.೨೯೧

೧೮. ಅದೇ, ಪು.೩೦೦

೧೯. ಅದೇ, ಪು.೩೦೭

೨೦. ಅದೇ, ಪು.೩೧೮

೨೧. ಅದೇ, ಪು.೩೫೦

೨೨. ಅದೇ, ಪು.೩೫೬

೨೩. ಅದೇ, ಪು.೩೭೬

೨೪. ಅದೇ, ಪು.೪೦೬

೨೫. ಅದೇ, ಪು.೪೧೬

೨೬. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೨೨೬

೨೭. ಅದೇ, ಪು.೨೨೭

೨೮. ಅದೇ, ಪು.೨೩೦

೨೯. ತಿರುಳಗನ್ನಡ ಅಖಿಲ ಭಾರತ ೬೨ನೇ ಕನ್ನಡ ಸಾಹಿತ್ಯ ಸಮ್ಮೇಳನ, ಪು.೨೩೦

೩೦. ದೇವರಾಕೊಂಡಾರೆಡ್ಡಿ(ಸಂ), ಪೂರ್ವೋಕ್ತ, ಪು.೪೬

೩೧. ಅದೇ, ಪು.೭೪

೩೨. ಅದೇ, ಪು.೨೫೯

೩೩. ಅದೇ, ಪು.೨೭೦

೩೪. ಅದೇ, ಪು.೨೬೪

೩೫. ಅದೇ, ಪು.೩೪೯

೩೬. ಅದೇ, ಪು.೩೭೧

೩೭. ಅದೇ, ಪು.೩೭೨

೩೮. ಅದೇ, ಪು.೩೭೬

೩೯. ಅದೇ, ಪು.೨೩೮

೪೦. ಅದೇ, ಪು.೩೯೮

೪೧. ಅದೇ, ಪು.೪೦೦

೪೨. ಅದೇ, ಪು.೪೧೪

೪೩. ಶಾಶ್ವತಸ್ವಾಮಿ ಮುಕ್ಕುಂದಿಮಠ, ಕೃಷ್ಣತುಂಗೆ ನೆಲೆದ ಸಿರಿ, ಪು.೮೫

೪೪. ಅದೇ, ಪು.೮೯

೪೫. ಅದೇ, ಪು.೯೧

೪೬. ಅದೇ, ಪು.೯೨

೪೭. ಅದೇ, ಪು.೯೩

೪೮. ಅದೇ, ಪು.೯೪

೪೯. ಜೋತ್ಸ್ನಾಕಾಮತ್, ಮಹಿಳೆಯ ಒಂದು ಅಧ್ಯಯನ, ಪು.೭೦

೫೦. ಅದೇ, ಪು.೭೧

೫೧. ಅದೇ, ಪು.೭೨

೫೨. ಅದೇ, ಪು.೭೬

೫೩. ಅದೇ, ಪು.೭೮

೫೪. ಸರಸ್ವತಿ ಎನ್., ವಿಜಯನಗರ ಅಧ್ಯಯನ ಸಂಪುಟ ೩, ಪು.೮೨

೫೫. ಚೆನ್ನಕ್ಕ ಪಾವಟೆ, ಕರ್ನಾಟಕ ಶಾಸನೋಕ್ತ ಮಹಿಳೆ, ಪು.೧

೫೬. ಅದೇ, ಪು.೨

೫೭. ಶೇಷಶಾಸ್ತ್ರೀ ಆರ್., ಕರ್ನಾಟಕದ ವೀರಗಲ್ಲುಗಳು, ಪು.೩೧೩

೫೮. ಅದೇ, ಪು.೩೧೪

೫೯. ಅದೇ, ಪು.೩೧೫

೬೦. ಕಮಲಾಹಂಪನಾ, ಬೋಗಸೆ, ಪು.

೬೧. ಚೆನ್ನಕ್ಕ ಪಾವಟೆ, ಪೂರ್ವೋಕ್ತ, ಪು.೪೭

೬೨. ಅದೇ, ಪು.೪೮

೬೩. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೨೦೫

೬೪. ಚೆನ್ನಕ್ಕ ಪಾವಟೆ ಪೂರ್ವೋಕ್ತ, ಪು.೪೭

೬೫. ಅದೇ, ಪು.೪೮

೬೯. ಅದೇ, ಪು.೪೯

೭೦. ಅದೇ, ಪು.೫೨

೭೧. ಅದೇ, ಪು.೫೩

೭೨. ಅದೇ, ಪು.೫೫

೭೩. ಅದೇ, ಪು.೫೬

೭೪. ಅದೇ, ಪು.೫೭

೭೫. ಅದೇ, ಪು.೫೮

೭೬. ಅದೇ, ಪು.೫೯

೭೭. ಅದೇ, ಪು.೬೦

೭೮. ಅದೇ, ಪು.೬೧

೭೯. ಅದೇ, ಪು.೬೨

# ಸಮಾರೋಪ

ಕನ್ನಡ ನಾಡು ಪ್ರಾಚೀನ ಕಾಲದಿಂದಲೂ ತನ್ನದೇ ಆದಂತಹ ಸಂಸ್ಕೃತಿಯನ್ನು ಹೊಂದಿದೆ. ಜಗತ್ತಿನ ಇತರೆ ಸಂಸ್ಕೃತಿಗಳಿಗಿಂತ ಅತ್ಯಂತ ಭಿನ್ನವಾದ ನೆಲೆಯಲ್ಲಿ ಸ್ಥಿರೀಕೃತಗೊಂಡ ಕನ್ನಡಿಗರ ಆಚರಣೆ, ನಂಬಿಕೆ, ಸಂಪ್ರದಾಯ ಮುಂತಾದ ಅಂಶಗಳಲ್ಲಿಯೂ ವೈವಿಧ್ಯತೆಯನ್ನು ಪಡೆದಿದ್ದಾರೆ. ಕನ್ನಡ ನಾಡಿನ ಪ್ರಮುಖ ಅರಸು ಮನೆತನಗಳು ನೆಲೆಯೂರಿ ಆಳಿದ್ದು ಇಲ್ಲಿ ಮಹತ್ವದ ಅಂಶವಾಗಿದೆ. ಇದಕ್ಕೆ ಸಾಕ್ಷಿಯಾಗಿ ಇಂದು ನಮಗೆ ದೊರೆತಿರುವ ಶಾಸನಗಳು ಹಾಗೂ ಶಾಸನಗಳಲ್ಲಿ ಕಂಡುಬರುವ ಸಮಗ್ರ ಸಂಗತಿಗಳು. ಇಲ್ಲಿನ ಒಟ್ಟು ಐತಿಹಾಸಿಕ ಹಾಗೂ ಸಾಂಸ್ಕೃತಿಕ ಪರಂಪರೆಯನ್ನು ಗುರುತಿಸುವ ಶಾಸನಗಳ ಅಧ್ಯಯನ ಮಾಡಿ ಇಲ್ಲಿನ ಪ್ರಾಮುಖ್ಯತೆಯನ್ನು ಎತ್ತಿ ಹಿಡಿಯಲಾಗಿದೆ.

ರಾಯಚೂರು ಜಿಲ್ಲಾ ಶಾಸನಗಳಲ್ಲಿ ಮಹಿಳೆಯರನ್ನು ಕುರಿತು ಶಾಸನಗಳ ಅಧ್ಯಯನದಿಂದ ನಮ್ಮ ಸಂಸ್ಕೃತಿ ಮತ್ತು ಚರಿತ್ರೆಗಳಿಗೆ ಸಂಬಂಧಿಸಿದಂತೆ ವಾಸ್ತವಿಕ ಅಂಶವನ್ನು ಗುರುತಿಸಲು ಸಾಧ್ಯವಾಗುತ್ತದೆ. ಈ ಅಧ್ಯಯನದ ಅವಧಿಯಲ್ಲಿ ಸಂಗ್ರಹಿಸಿದ ಮೂಲ ಹಾಗೂ ಅನುಷಂಗಿತ ಆಕರಗಳು ಈ ಜಿಲ್ಲೆಯ ಅಂದಿನ ಕಾಲದ ಚಾರಿತ್ರಿಕ ಹಾಗೂ ಸಂಸ್ಕೃತಿಕ ವಿಚಾರಗಳ ಬಗೆಗೆ ನಿಖರವಾದ ಸ್ಪಷ್ಟತೆಯನ್ನು ಪಡೆಯಲು ವಿಪುಲವಾದ ಸಾಮಾಗ್ರಿಗಳನ್ನು ಒದಗಿಸಿವೆ. ಸಂಗ್ರಹಿಸಿದ ಮಾಹಿತಿಯನ್ನು ಇದುವರೆಗೂ ನಡೆಸಿರುವ ಚರ್ಚೆಯಲ್ಲಿ ಪುನರ್ ಅವಲೋಕಿಸಲಾಗಿದೆ. ಇದರೊಂದಿಗೆ ನಮ್ಮ ಅಧ್ಯಯನದ ಚಿಂತನಶೀಲತೆಯಿಂದ ಸಾಹಿತ್ಯದ ಹಿನ್ನೆಲೆಯಲ್ಲಿ ಅಭ್ಯಸಿಸಿ ಇದರಿಂದ ಸಮಾಜಕ್ಕೆ ಒಂದು ಹೊಸ ವಿಷಯದ ಪರಿಚಯ ಮಾಡಿಕೊಡುವುದರ ಮೂಲಕ ರಾಯಚೂರು ಜಿಲ್ಲೆಯ ಮಹತ್ವತೆಯನ್ನು ಗುರುತಿಸಲಾಗಿದೆ. ಹೀಗಾಗಿ ರಾಯಚೂರು ಜಿಲ್ಲೆಗೆ ಸಂಬಂಧಿಸಿದ ಶಾಸನಗಳನ್ನು ಮೂಲ ಆಕರಗಳನ್ನಾಗಿಸಿಕೊಂಡು ಪೂರಕ ಆಕರಗಳೊಂದಿಗೆ ಕೈಗೊಂಡಿರುವ ಅಧ್ಯಯನವನ್ನು ಪೂರೈಸಲು ಐದು ಅಧ್ಯಾಯಗಳಾಗಿ ಪ್ರಸ್ತುತ ಸಂಶೋಧನಾ ನಿಬಂಧದಲ್ಲಿ ವಿಂಗಡಸಿಕೊಳ್ಳಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಕುರಿತು ಮತ್ತು ಕ್ಷೇತ್ರಕಾರ್ಯದ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ರಾಯಚೂರು ಜಿಲ್ಲೆಯಲ್ಲಿ ದೊರೆತ

ಒಟ್ಟು ಶಾಸನಗಳನ್ನು ಕಲೆ ಹಾಕಿ ಅದರಲ್ಲಿ ಮಹಿಳೆಯರು ಉಲ್ಲೇಖಗೊಂಡ ೬೦ ಶಾಸನಗಳನ್ನು ಇಟ್ಟುಕೊಂಡು ಅವುಗಳಿಂದ ತಿಳಿದು ಬಂದ ವಿಷಯವನ್ನು ನನ್ನ ಅಧ್ಯಯನದ ಪರಿಮಿತಿಯಲ್ಲಿ ಸ್ಥೂಲವಾಗಿ ಸಂಗ್ರಹಿಸಿ ಅದರ ಸ್ವರೂಪವನ್ನು ಸಮಗ್ರವಾಗಿ ಅಧ್ಯಯನಿಸಲಾಗಿದೆ.

ಅಧ್ಯಾಯ ಎರಡು : ಈ ಅಧ್ಯಾಯದಲ್ಲಿ ಅಧಿಕಾರಿ ವರ್ಗದವರು ಎಂದರೆ ಯಾರು ಮತ್ತು ರಾಣಿಯರು, ರಾಣಿಯರ ಪ್ರಶಸ್ತಿ ಮತ್ತು ಬಿರುದುಗಳನ್ನು ಕುರಿತು ಹೇಳುತ್ತಾ, ವೇದ, ಪುರಾಣ, ಸ್ಮೃತಿಗಳ ಕಾಲದಿಂದಲೂ ಸ್ವಾತಂತ್ರ್ಯ ಸಮಾನತೆ ಮತ್ತು ಸಂಸ್ಕಾರ, ಶಿಕ್ಷಣದಲ್ಲಿ ಯಾವ ಹಕ್ಕು ಇತ್ತೆಂಬುದನ್ನು ಹೇಳಲಾಗಿದೆ.

ಅಧ್ಯಾಯ ಮೂರು : ಅಧ್ಯಾಯ ಮೂರರಲ್ಲಿ ಸಾಮಾನ್ಯ ವರ್ಗದ ಮಹಿಳೆಯರು ಸಾಮಂತರು, ಮಹಾಸಾಮಂತರು, ಸೆಟ್ಟಿಗಳು, ಶ್ರೀಮಂತವರ್ಗದ ಪ್ರಭುಗಾವುಂಡರು, ಗಾವುಂಡರಸರನ್ನು ವಿವರಿಸುತ್ತ ಅವರ ಜೊತೆಗೆ ವೃತ್ತಿಕಾರರು ಗ್ರಾಮೀಣ ಮಹಿಳೆ ಮತ್ತು ಕೆಳವರ್ಗದ ಮಹಿಳೆಯರ ಬದುಕು ಬರಹಗಳನ್ನು ಸಂಕ್ಷಿಪ್ತವಾಗಿ ಹೇಳಲಾಗಿದೆ.

ಅಧ್ಯಾಯ ನಾಲ್ಕು : ಈ ಅಧ್ಯಯನದಲ್ಲಿ ಹಿಂದಿನಿಂದ ಇಂದಿನವರೆಗಿನ ಮಹಿಳೆಯರ ಸ್ಥಿತಿಗಳನ್ನು ವಿವರಿಸುತ್ತಾ, ಜೊತೆಯಲ್ಲಿಯೇ ನಮ್ಮ ನಾಡಿಗೆ ಮಹಿಳೆಯ ಸಮಾಜ ಸೇವೆ ಕಾರ್ಯಗಳು ಮಾಡಿದ ವಿಷಯಗಳನ್ನು ಬರೆಯಲಾಗಿದೆ. ಮತ್ತು ಹಿಂದಿನ ಶಿಕ್ಷಣ ವ್ಯವಸ್ಥೆ ಮಹಿಳೆಯರಿಗೆ ಯಾವ ರೀತಿಯಾಗಿ ಲಭ್ಯವಿರುತ್ತಿತ್ತು ಎಂಬುದನ್ನು ಹೇಳಲಾಗಿದೆ. ಮಹಾಸತಿಯರ ಆಚರಣೆ ಬೆಳೆದುಕೊಂಡು ಬಂದ ಬಗ್ಗೆ ಮತ್ತು ಯಾಕೆ ಒಬ್ಬ ಸ್ತ್ರೀ ಮಾಸ್ತಿಯಾಗಲು ಸಿದ್ಧಳಿರುತ್ತಿದ್ದಳೆಂಬುದನ್ನು ಹೇಳುತ್ತಾ ನಮ್ಮ ನಾಡಿನಲ್ಲಿ ಮಹಿಳೆಯರು ಕೂಡ ಪುರುಷರಂತೆ ಜನಿಸಿದ ನಾಡಿಗಾಗಿ, ದೇಶಕ್ಕಾಗಿ, ರಾಜ್ಯಕ್ಕಾಗಿ, ಜನರ ಪೋಷಣೆಗಾಗಿ ವೀರರಂತೆ ಮಹಿಳೆಯರು ವೀರರಮಣಿಯರಾಗಿ ಹೋರಾಡಿದ ವಿಷಯವನ್ನು ವಿಶ್ಲೇಷಿಸಲಾಗಿದೆ. ಮತ್ತೆ ಇವರಲ್ಲಿ ಕೊನೆಯದಾಗಿ ವೇಶ್ಯೆಯರು ತಮ್ಮ ಸಮಾಜ ಒಬ್ಬ ಮಹಿಳೆಯನ್ನು ಯಾವ ರೀತಿಯಾಗಿ ವೇಶ್ಯಾವಾಟಿಕೆಗೆ ಒಳಪಡಿಸುತ್ತದೆ. ಮತ್ತು ಈ ಪದ್ಧತಿಯು ಹೇಗೆ ಬೆಳೆದುಕೊಂಡು ಬಂತು ಮತ್ತು ನಾಡಿಗೆ ಅವರ ಕೊಡುಗೆ ಏನು ಮತ್ತು ಹೆಚ್ಚಾಗಿ ವೇಶ್ಯೆಯರು ಕೆಳಜಾತಿಯವರಾಗಿದ್ದರು ಎಂಬುದನ್ನು ಹೇಳಲಾಗಿದೆ.

ಅನುಬಂಧ ಮಹತ್ವದ ಶಾಸನಪಾಠ : ರಾಯಚೂರು ಜಿಲ್ಲೆಯ ಮಾಹಿತಿಯನ್ನು ಉಲ್ಲೇಖಿಸುವ ಅದರಲ್ಲೂ ಮಹಿಳೆಯರ ಬಗ್ಗೆ ತಿಳಿಸಿಕೊಡುವ ಶಾಸನಗಳ ಪಾಠವನ್ನು ಕೊಡಲಾಗಿದೆ.

**೨. ನಕಾಶೆ :** ರಾಯಚೂರು ಜಿಲ್ಲೆಯ ಹಾಗೂ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ತಾಲೂಕುಗಳ ನಕಾಶೆಯನ್ನು ಕೊಡಲಾಗಿದೆ.

೩. ಚಿತ್ರಗಳು : ಕ್ಷೇತ್ರಕಾರ್ಯದ ಮೂಲಕ ಶಾಸನಗಳು ಇರುವಲ್ಲಿಗೆ ಹೋಗಿ ಚಿತ್ರಗಳನ್ನು ತೆಗೆಯಲಾಗಿದೆ. ಶಾಸನೋಕ್ತ ದೇವಾಲಯಗಳು, ಮಾಸ್ತಿಗಲ್ಲುಗಳು, ಮಹಿಳೆಯರ ಕುರಿತು ಉಲ್ಲೇಖವಾಗಿರುವ ಶಾಸನಗಳ ಚಿತ್ರಗಳು ಮತ್ತು ಇತರೆ ಶಿಲ್ಪಗಳ ಚಿತ್ರಗಳನ್ನೇ ಕೊಡಲಾಗಿದೆ. ಈ ಚಿತ್ರಗಳು ಅಂದಿನ ಕಾಲದಲ್ಲಿ ರಾಯಚೂರು ಜಿಲ್ಲೆಯ ಮಹತ್ವತೆಯನ್ನು ಗುರುತಿಸುವಂತವುಗಳಾಗಿ ರಾಯಚೂರು ಜಿಲ್ಲಾ ಶಾಸನಗಳ ಕುರಿತು ಮೂಢಿಬಂದ ಕೃತಿಗಳು ಹಾಗೂ ಇವುಗಳಿಗೆ ಪೂರಕವಾಗಿ ಬಳಸಿಕೊಂಡ ಹೊಸ ಪರಾಮರ್ಶಕ ಗ್ರಂಥಗಳ ಪಟ್ಟಿಯನ್ನು ಕೊಡಲಾಗಿದೆ.

ಒಟ್ಟಾರೆಯಾಗಿ ಹೇಳಬೇಕೆಂದರೆ ಶಾಸನಗಳು ಇತಿಹಾಸವನ್ನು ಕುರಿತು ಗಟ್ಟಿಯಾದ, ಖಚಿತವಾದ, ಸ್ಪಷ್ಟವಾದ ಮಾಹಿತಿಯನ್ನು ನೀಡುವ ಆಧಾರಸ್ಥಂಭಗಳಾಗಿವೆ. ಇವು ಅತ್ಯಂತ ಮಹತ್ವದ ಹಾಗೂ ನಂಬಲರ್ಹವಾದ ಮೂಲಾಧಾರವಾದುದರಿಂದ ಇತರ ಆಧಾರಗಳು ತುಂಬಿಕೊಡಲಾರದ ಕೆಲವು ಅಂಶಗಳನ್ನು ಇಲ್ಲಿನ ಶಾಸನ ಸಂಪತ್ತು ಒದಗಿಸಿಕೊಟ್ಟಿದೆ. ಆಯಾಕಾಲದ ವಿವಿಧ ಮುಖಗಳ ಪರಿಚಯ ಮಾಡಿಕೊಡುವುದರೊಂದಿಗೆ ಅವರ ರೂಢಿ ಸಂಪ್ರಾದಾಯಗಳು, ನಂಬಿಕೆ-ಆಚರಣೆ, ಪ್ರಗತಿ ಸಾಧನೆಗಳ ಸ್ಪಷ್ಟ ಚಿತ್ರಣವನ್ನು ಶಾಸನಗಳು ಕೊಡುತ್ತವೆ. ಜಿಲ್ಲೆಯ ಶಾಸನಗಳು ತಮ್ಮದೇ ಆದ ವೈಶಿಷ್ಟ್ಯತೆಯಿಂದ ಇತಿಹಾಸದಲ್ಲಿ ಪ್ರಮುಖ ಪಾತ್ರ ಪಡೆದುಕೊಂಡಿವೆ. ಈ ಶಾಸನಗಳಿಂದ ತಿಳಿದುಬರುವ ಒಟ್ಟು ವಿಷಯಗಳನ್ನು ಸಂಗ್ರಹಿಸಿ ರಾಯಚೂರು ಜಿಲ್ಲೆಯ ಇತಿಹಾಸ ಸ್ಥೂಲವಾದ ಚಿತ್ರಣವನ್ನು ಒದಗಿಸಲಾಗಿದೆ. ಮತ್ತು ಕನ್ನಡ ನಾಡಿನ ಮಹಿಳೆಯರ ಸಮಾಜವು ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಗಳಲ್ಲಿ ಜಿಲ್ಲೆಯು ಪಡೆದುಕೊಂಡಿರುವ ಮಹತ್ವವನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

# ಅನುಬಂಧಗಳು

೧. ನಕ್ಷೆಗಳು

೨. ಶಾಸನ ಪಾಠಗಳು

೩. ಗ್ರಂಥಋಣ

೪. ಛಾಯಾಚಿತ್ರಗಳು

# ೧

## ನಕ್ಷೆಗಳು


ರಾಯಚೂರು ಜಿಲ್ಲೆ
ಕೃಷ್ಣಾ ನದಿ
ಕೃಷ್ಣಾ ನದಿ
ಭೀಮಾ ನದಿ
ಆಂಧ್ರ ಪ್ರದೇಶ
ಗುಲ್ಬರ್ಗ ಜಿಲ್ಲೆ
ದೇವದುರ್ಗ
ಹಿರೇರಾಯಕುಂಪಿ
ಜಾಲಹಳ್ಳಿ
ಚಂದನಕೇರಿ
ವೀರಗೋಟ
ಕೊಡ್ಲೂರು
ದೇವಸೂಗೂರು
ಗುರುಗುಂಟ
ಅರಕೆರ
ಗಬ್ಬೂರು
ಜಲದುರ್ಗ
ಬಿಜಾಪುರ ಜಿಲ್ಲೆ
ಹಟ್ಟಿ
ಆನ್ವರಿ
ಸಿರಿವಾರ
ಕಲ್ಮಾಲ
ರಾಯಚೂರು
ನವಿಲೆ
ಲಿಂಗಸೂಗೂರು
ಕರಡಿಕಲ್ಲ್
ಕವಿತಾಳ
ಮಲ್ಲಟ
ಬಲ್ಲಟಗಿ
ಕಲ್ಲೂರು
ಮಿರ್ಜಾಪುರ
ಯರಗೇರಾ
ಮಾನ್ವಿ
ಕುರುಡಿ
ಬಾಗಲವಾಡ
ಸುಂಕೇಶ್ವರ
ಇಡಪನೂರು
ಆಂಧ್ರ ಪ್ರದೇಶ
ಮುದಗಲ್
ಕನ್ನಾಳ
ಮಸ್ಕಿ
ಭೋಗಾವತಿ
ಬಳಗಾನೂರು
ತುಂಗಭದ್ರಾ ನದಿ
ಮಂತ್ರಾಲಯ ರಸ್ತೆ
ಆಂಧ್ರ ಪ್ರದೇಶ
ಮಸ್ಕಿ ಹಳ್ಳ
ದೇವರಗುಡಿ
ಸಿಂಧನೂರು
ಒಳಬಳ್ಳಾರಿ
ಬಳ್ಳಾರಿ ಜಿಲ್ಲೆ
ಕೊಪ್ಪಳ ಜಿಲ್ಲೆ
ಜಾಲಿಹಾಳು
ರೌಡಗುಂದೆ
ಸಾಲಗುಂದೆ
ಬೇವಿನಹಳ್ಳಿ
ಮುಕುಂದ

# ಸಿಂಧನೂರು ತಾಲೂಕು

## ರಾಯಚೂರು ಜಿಲ್ಲೆ

ಲಿಂಗಸೂಗೂರು ತಾ
ಬಳಗನೂರು
ಸುಂಕನೂರು
ಮಾನ್ವಿ ತಾ
ದಿದ್ದಿಗಿ
ಬನ್ನಿಗನೂರು
ಯಾಪಲಪರ್ವಿ
ಜವಳಗೇರ
ಗದ್ದಡಿಕಿ
ಬೂಪ್ಪೂರು
ಕೊಳಬಾಳು
ದೇವರಗುಡಿ
ಹಿರೇಬೇರಿಗಿ
ಸಿಂದನೂರು
ಬಾದರ್ಲಿ
ಒಳಬಳ್ಳಾರಿ
ಮಾಡಶಿರವಾರ
ಬೆಳ್ಳುರ್ಕಿ
ಕನ್ನಾರಿ
ಬೂದಿವಾಳ
ತುಂಗಭದ್ರ ನದಿ
ಜಾಲಿಹಾಳು
ರೌಡಕುಂದೆ
ಸಾಲಗುಂದೆ
ಗಂಗಾವತಿ ತಾ
ಸಿದ್ಧಾರಾಂಪುರ
ಸಿರುಗುಪ್ಪ ತಾ
ಬೇವಿನಹಳ್ಳಿ
ಮುಕ್ಕುಂದಿ
ಸಿಂಗಾಪುರ





ಮಾನ್ವಿ ತಾಲೂಕು
ರಾಯಚೂರು ಜಿಲ್ಲೆ
ದೇವದುರ್ಗ ತಾ
ರಾಯಚೂರು ತಾ
ಲಿಂಗಸೂಗೂರು ತಾ
ಸಿಂಧನೂರು ತಾ
ಆಂಧ್ರ ಪ್ರದೇಶ
ತುಂಗಭದ್ರ ನದಿ
ಹೀರಾ
ಕುರಕುಂದ
ವಡವಾಟಿ
ಪಡಪನದೊಡ್ಡಿ
ಸಿರಿವಾರ
ಆತನೂರು
ಕಲ್ಲೂರು
ಮಲ್ಲಟ
ನುಗಡೋಣಿ
ಬಲ್ಲಟಗಿ
ಜಂಜಲದಿನ್ನಿ
ಮಾಡಗಿರಿ
ಬೇವಿನೂರು
ಹರವಿ
ಕಪಗಲ್ಲು
ಬೆಟದೂರು
ಕುರುಡಿ
ಆರೋಲಿ
ಅಮೀನ್‌ಗಡ್
ಕವುತಾಳ
ವಟಗಲ್
ತುಪ್ಪದೂರು
ಗುಡಿಹಾಳ
ಗೂಗೇಬಾಳ
ಜೋಳದರಾಶಿ
ಬಾಗಲವಾಡ
ಮಲ್ಲಿಗೆಮಡುವು
ಸುಂಕನೂರು
ಅಮರಾವತಿ
ಮಾನ್ವಿ
ಸುಂಕೇಶ್ವರ
ಗೋರ್ಕಲ್ಲು
ಕೊರವಿ
ಜೂಕೂರು
ರಾಜೊಳ್ಳಿ
ಪದ್ದಲಿಪನ್ನೂರು
ಕಾತರಕಿ
ರಾಜಲದಿನ್ನಿ
ಭೋಗಾವತಿ
ಹಿರೇಕೊಟ್ನೆಕಲ್
ತಡಕಲ್ಲು
ಮಾದಲಾಪೂರ
ಚೀಕಲಪರ್ವಿ

೨

# ಶಾಸನ ಪಾಠಗಳು

೧

## ಗಬ್ಬೂರು

**ರಾಯಚೂರು ಅಗಸಿಯ ಹನುಮಂತ ದೇವಾಲಯದ ಆವರಣದಲ್ಲಿನ ಶಾಸನ**

ಹಿರಿಯ ಗೊಬ್ಬೂರ ದೇವಣಶೀತದ ವೀಸಕದಲ್ಲಿ ಕರಿಯ

ಜನ್ನಯ ಭಟ್ಟ ಸೋಮಯಾಜಿಯರು ತಮ್ಮ ವ್ರಿತ್ರಿಯೊಳ

ಗಣ ಮೂಡಣ ಬೆಟ್ಟಬಾಗಿನ ಸ್ಥಳದಲ್ಲಿ ಮಾಣಿಕೇಶ್ವರದ ಅ

ಯ್ದು ಮತ್ತರು ಕೊಱಮಣ್ಣಕೆಯ್ಯನು ಕರಿಯ ಮು

ಸ್ಯಣಭಟ್ಟೋಪಾಧ್ಯಾಯ . ಕಲಯ್ಯಗಳು ಡೋಣಭಟ್ಟರಿಗೆ ಆ

(ಜ)ನ್ನಯಭಟ್ಟ ಸೋಮಯಾಜಿಯರು ತಮ್ಮ ಕೆಯ್ಯ ದಾನಗೊಟ್ಟರು

. (ಸ್ಯ)ಣಭಟ್ಟೋಪಾಧ್ಯಾಯರು ಅವರ ಬ್ರಾಹ್ಮಣಿ ನಾಲಿಕಬ್ಬೆಯು ತ

...ಮತ್ತರು ಕೆಯ್ಯ ತಮ್ಮ ಮಹಾದೇವರಿಗೆ ಧೂಪದ್ವೀಪ

...ರ್ತ್ಥವಾಗಿ ಹಿರಿಯ ಸಂಕ್ರಮಣದಂದು ಕೊಟ್ಟರು ಮತ್ತ

...ಸುಪೆ ವಡ್ಡದಿ ಭಟ್ಟ ಸೋಮಯಾಜಿಯರು ಅವರ

...ದ್ದವ್ರಿತ್ತಿಯೊಳಗೆ ಜಡೆಹಳ್ಳದ ಸ್ಥಳದ ಮಾಣಿ

.....ಣ್ಣ ಕೆಯ್ಯ ವ್ರಿತ್ತಿ ದಾನವಾಗಿ ಕೊಟ್ಟರು ಇ ಧ

......ದೇವರಿಗೆ ಪೂಜಾರ್ತ್ಥವಾಗಿ ಕೊಟ್ಟರು

೨

## ಗಬ್ಬೂರು

**ದೇವಾಲಯದ ಎಡಬದಿಗೆ ಒರಗಿಸಿರುವ ಶಾಸನ**

ಚಾಮಿಕವ್ವೆಯ ಕೇಸವನು ಮಾಲೆಗಾರ ಮಲ್ಲೆಯನ ಮಗಂ ಸೋವಣನ ಕೈಯ್ಯಲು ಸಲೆ ಮಾಱಗಿ ಕೊಣ್ಡು ಶ್ರೀ

ತ್ರಿಪುರಾಂತಕ ದೇವರಿಗಂ ಶ್ರೀ ಕೇಶವ ದೇವರಿಗಂ ಹೂದೋಟಕ್ಕೆ ಸ್ವಸ್ತಿ ಶ್ರೀಮಚ್ಚಾಳುಕ್ಯ

ತ್ರೈಳೋಕ್ಯಮಲ್ಲ ವರ್ಷದ ೫ನೆಯ ಭಾವ ಸಂವತ್ಸರದ ಫಾಲ್ಗುಣ ಬಹುಳ ೧ ವಡ್ಡವಾರದಂದು ಶ್ರೀಮತ್ಸರ್ವ್ವ ನಮಸ್ಕೃದಗ್ರ

ಹಾರ ಕಲ್ಲೂರಸ್ಥಳದ ಉತ್ತರದಿಶೋಭಾಗದ ಶ್ರೀ ಗವಱೇಶ್ವರದೇವರ ಸ್ಥಳದಲು ತೋರಣಂ

ಗಟ್ಟಿದದಯ್ಯಾವೊಳೆಯ ಆಯ್ನೂರ್ವ್ವರು ಶ್ವಾಮಿಗಳೊಂದು ಮುಖವಾಗಿ ಮೂವತ್ತಾಱು ಬೀಡುಗಳುಂ ಸೊ

ಗದೇಳೂನ್ನೂಱು ಗವಱೆಗಳಿಂತು ಸಮಸ್ತ ದೇಸಿಯುಂ ಮಹಾನಾಡು ಸಮುದ್ರಮಥನ

೩

## ಗಬ್ಬೂರು

**ಹರಿಹರೇಶ್ವರ ದೇವಾಲಯದಲ್ಲಿ ಇರಿಸಿರುವ ಶಾಸನ**

ಗೊಬ್ಬೂರಲ್ಲಿ ಪ್ರತಿಷ್ಟೆ ಮಾಡಿದ ಶ್ರೀ ಹರಿಹರ ದೇವರಿ

ಗಂ ಶ್ರೀ ಸಿದ್ಧಸೋಮನಾಥ ದೇವರಿಗಂ ಪೂಜೆ ಪುನಸ್ಕಾಂ

ಧೂಪ ದೀಪ ನಿವೇದ್ಯ ವಸ್ತ್ರಾಲಂಕಾರ ಚೈತ್ರಪೈತ್ರಕ್ಕಂ ಬಾವಿ ಧರ್ಮ್ಮೋ

ತಕ್ಕಂ ಆಚಂದ್ರಾರ್ಕ್ಕ ತಾರಂಬರಂ ಸಲ್ವಂತಾಗಿ ಆ ಲಕ್ಷುಮಕ್ಕನು

ತಂಮ್ಮಯ್ಯಂಗಳಿಗಂ ತನಪುರುಷಂಗಂ ತನಗಂ ಶ್ರೇಯಾರ್ತ್ಥವಾ

ಗಿ ಧಾರಾಪೂರ್ವ್ವಕಂ ಮಾಡಿ ಆ ಬೆಳೆ ವ್ರಿತ್ತಿಯನು ಕೊ

ಟ್ಟಿಳು ‖ ಈ ಧರ್ಮ್ಮಕ್ಕೇನಾನುಂ ಬಾಧೆಯನೊಡರಿಸಿದ ಪಾತಕಂ

ಪುಗುಗುಂ ನಿಸ್ಸೋಧಾರಣೋಗ್ರ್ಯ ಪುಂಖಮಯೋಖಾ

ಭುವನಮನತಿ ವಿದುಸ್ತರತರಮಂ ‖ ಸ್ವದತ್ತಂ ಪರದತ್ತಂ

೪

## ಗಬ್ಬೂರು

**ಊರಿನ ಕೊರಮರ ಬಾವಿಗೆ ಸೇರಿಸಿರುವುದು**

ಓಂ ನಮಃ ಶಿವಾಯ ‖ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾ

ಮರ ಚಾರವೇ । ತ್ರೈಲೋಕ್ಯ ನಗರಾರಂಭ ಮೂಲ ಸ್ತಂಭಾಯ

ಶಂಭವೇ ‖ ಸ್ವಸ್ತಿ ಶ್ರೀಮಚ್ಚಾಳುಕ್ಯ ಪ್ರತಾಪ ಚಕ್ರವರ್ತ್ತಿ ಜಗ

ದೇಕಮಲ್ಲದೇವ ವರ್ಷದ ೧೧ ನೆಯ ವಿಭವ ಸಂವತ್ಸರದ ಶ್ರಾವ

ಣ ಶುದ್ಧ ೭ ವಡ್ಡವಾರದಂದು ಸ್ವಸ್ತಿ ಯಮ ನಿಯಮ ಸ್ವಾಧ್ಯಾ

ಯ ಧ್ಯಾನ ಧಾರಣ ಮೌನಾನುಷ್ಠಾಣ ಜಪ ಸಮಾಧಿ ಶೀಲ ಸಂ

ಪನ್ನರು ಉಪಾಸನಾಗ್ನಿ ಹೋತ್ರ ದ್ವಿಜ ಗುರು ಪೂಜಾತತ್ಪ

ರಮ್ಮಾರ್ತ್ತಾಡೋಜ್ವಳ ಕೀರ್ತ್ತಿಯುತರ್ಸ್ಸಕಳ ಶಾಸ್ತ್ರ ವಿಶಾರದರ

ಪ್ಪ ಶ್ರೀಮತ್ಸರ್ವ್ವ ನಮಸ್ಯದಗ್ರಹಾರಂ ಹಿರಿಯ ಗೊಬ್ಬೂರ ಅ

ಶೇಷ ಮಹಾಜನಂಗಳ ದಿವ್ಯಶ್ರೀಪಾದ ಪದ್ಮಾರಾಧಕರುಂ ಶ್ರೀ

ಸೋಮೇಶ್ವರದೇವರ ಗಂನ್ಧವಾರಣ ಚೇಡಕುಳ ತಿಳಕ ಚೇಡರ ದಾಸಿಮ

ಯ್ಯ ಪ್ರಿಯ ಪುತ್ರರುಮಪ್ಪ ಸಕಳ ಚೇಡಗೊತ್ತಳಿಗಳು ತಮ್ಮ ಕು

ಲ ದೈವವಪ್ಪ ಗೊಜ್ಜೇಶ್ವರದೇವರ ಪೂಜೆ ಪುನಸ್ಕಾರ ನೈವೇದ್ಯ

ಕ್ಕಂ ಬಿಸಿಗೆ ದಸರಿಯ ಬಿಟ್ಟ ಹಾಗ ೧ ಆ ದೇವರ ಬ

ಡಗ ದೆಸೆಯಲು ಮಾದಿಯಣ್ಣ ಮಾಡಿಸಿದ ಶ್ರೀ ಮಲ್ಲಿಕಾ

ರ್ಜುನ ದೇವರ್ಗ್ಗೆ ಬಿಸಿಗೆ ಹಸರಿಯಲುವಿಟ್ಟ ವೀಸ ೧ ಅಂತು ಬಿ

ಸಿಗೆಯಲು ಆಱು ವೀಸವನ್ನೆನೂರ್ಬ್ಬರುಂ ಚೇಡಗೊತ್ತಳಿಗ

ಳು ವಾ ಚಂದ್ರಾರ್ಕ್ಕ ತಾರಂಬರಂ ಸಲುವಂತಾಗಿ ಧರ್ಮ್ಮಾರ್ತ್ಥವಾಗಿ ಬಿಟ್ಟರ್ |

ಚೇಡೇಶ್ವರ ದೇವರಿಗೆ ಸೂಳೆ ಹೇಮವ್ವೆಯಲ್ಲಿ ಹ ೧ ಸರ್ಬ್ಬಸ |

ಇ ಶಾಸನ ಪ್ರತಿಷ್ಠೆಯು ||

೫೨

## ದೇವದುರ್ಗ

**ಈರಣ್ಣದೇವರ ಗುಡ್ಡದ ತುದಿಯಲ್ಲಿ ಅನೇಕ ಉಬ್ಬುಶಿಲ್ಪಗಳನ್ನು ಬಿಡಿಸಿರುವ ದೊಡ್ಡ ಬಂಡೆಯ ಮೇಲೆ**

೦ || ದ ಕೆರೆ ಹಾಕಿಸಿ ದೇವದುರ್ಗಕ್ಕೆ ಹುಗ್ಗಿ ಹೊಯಿಸಿ ನಿರ್ಮಿತವ ಮಾಡಿ ಶ್ರೀ

ಗೋವರ್ಧನದ ಗೋಪಾಲ ಕೃಷ್ಣನ ಪ್ರತಿಷ್ಠೆ ಮಾಡಿ ಪೇಟೆ ಹುಟಿಸಿ ಸಂತೆ ನೆರಹಿ

ಅಲ್ಲಿಂದ ಆಮಲೆ ದೇವರದುರ್ಗದ ನಿಂ

೦ || ರ್ಮಿತವಂ ಮಾಡಿ ಆ ತರುವಾಯ ಮಲ್ಲೇದೇವರ ದುರ್ಗವನು ಕಟ್ಟಿ ನಿರ್ಮಿತವಂ

ಮಾಡಿದನೂ ಕಾಸಲಯಗವುಡನ ಕೊಮಾರರೂ ಗವುಡಪ್ಪ ನಾರಾಯಣ ವಾಸುದೇವ

ಹರೀಶ್ವ

೦ || ರ ಕಮಲಧರ ದೇವೊಂಕಾರ ಚಿಕ್ಕ ಕಮಲಧರ ಹೆಣ್ಣು ಮಕ್ಕಳು ವೀರವ್ವ ತಿಂಮ್ಮವ್ವ ಕಾನಾವ್ವ

ಕೃಷ್ಣಂಮ ಸಕ್ಕರ್ರೆವ್ವ ವರದವ್ವ ಮಂಗಮ್ಮ ವೆಂಕಮ್ಮ ಕಾಸಲಯ್ಯ

೦ || ಗವುಡನ ಆರ್ದಾಗನೆಯರು ಲಕ್ಷ್ಮಮವ್ವ ವಂಕವ್ವ || ಸುರಪುರದ ವಿಸ್ತಾರ ಯೀ

ದೇವದುರ್ಗ ಸುಂಧರ ಪ್ರಾಕಾರ ಮುಗಿಲಟ್ಟಣೆಯ ಹುಲಿಮುಖಂ ಸರುವರುದ ರಾಜಗೃಹದ

ಶೃಂಗಾರಮಂ ಶೋ

೬

## ಲಿಂಗಸೂಗೂರು

**ಕಲ್ಲೇಶ್ವರ ದೇವಾಲಯದಲ್ಲಿನ ಶಾಸನ**

ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಪ್ರಿಥ್ವೀವಲ್ಲಭಂ

ಮಹಾರಾಜಾಧಿರಾಜ ಪರಮೇಸ್ವರ ಪರಮಭಟ್ಟಾರ

ಕಂ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ ಶ್ರೀ

ಮತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೋತ್ತ

ರಾಭಿವ್ರಿದ್ಧಿ ಪ್ರವರ್ದ್ಧಮಾನಮಾ ಚಂದ್ರಾರ್ಕ್ಕತಾರಂಬರಂ ಕ

ಲ್ಯಾಣದ ನೆಲೆವೀಡಿನೊಳೆ ಸುಖಸಂಕತಾ ವಿನೋದದಿಂ ರಾ

ಜ್ಯಂ ಗೆಯ್ಯುತ್ತಮಿರೆ ತತ್ಪಾದ ಪದ್ಮೋಪಜೀವಿ ಸ್ವಸ್ತ್ಯನವರತ

ಪರಮ ಕಲ್ಯಾಣಾಭ್ಯುದಯ ಸಹಶ್ರ ಫುಳಭೋಗ ಭಾ

ಗಿನಿ ದ್ವಿತೀಯಲಕ್ಷ್ಮೀ ಸಮಾನೆ ಕಳಹಂಸಯಾನೆ ಯಾಶ್ರಿ

ತಜನ ನಿಧಾನೆ ರೂಪವಿದ್ಯಾಧರಿ ಸಕಳಕಳಾಧರಿ ಕ

ಸ್ತೂರಿಕಾಮೋದೆ ದಾನವಿನೋದೆ ಶ್ರೀಮತ್ರಿಭುವನಮ

ಲ್ಲದೇವ ವಿಷಾಳ ವಕ್ಷಸ್ಥಳನಿವಾಸಿನಿಯರಪ್ಪ ಶ್ರೀಮ

ದಬ್ಬಲದೇವಿಯರು ಕರಡಿಕಲ್ಲೂನೂಱಱ ಬಳಿಯ ಭತ್ತಗ್ರಾ

ಮಂ ಲಿಂಗಮನಾಳುತ್ತಮಿರೆ || ಸ್ವಸ್ತಿ ಸಮಧಿಗತ ಪಂಚಮಹಾ

೭

## ಮಸ್ಕಿ

ಈಗ ಹೈದ್ರಾಬಾದ್ ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿರುವ ಶಾಸನ

ಸ್ವಸ್ತಿ ಸಮಸ್ತ ಭುವನಾಶ್ಯರಂ ಶ್ರೀಪ್ರುಥ್ವೀವಲ್ಲಭಂ

ಮಹಾರಾಜಾಧಿರಾಜಂ ಪರಮೇಶ್ವರಂ ಪರಮಭಟ್ಟಾರ

ಕಂ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ

ಶ್ರೀಮಜ್ಜಗದೇಕಮಲ್ಲದೇವರ ಮಗ(ಳ್) ಸಹಜವೆ

ಡಂಗಿ ಶ್ರೀ ಸೋಮಲದೇವಿಯರ್ ಸಕವರ್ಷ ೯೪೯

(ನೆ)ಯ ಪ್ರಭವ ಸಂವತ್ಸರದ ಪುಷ್ಯ ಬ ೯ ಆ

(ದಿ)ತ್ಯವಾರದಂದು ಪುಲಿಪೊದಱ ಪಲವುವಪ್ಪ

ಯಣವೀಡಿನೊಳ್ ತಂಬಿವಟ್ಟಂ ಬೆಸವೋಜನ

ಬಿನ್ನಪದಿಂ ಸಮಸ್ತ ಪ್ರ(ಧಾ)ನರುಂ ದಯಗೆಯ್ಯು

ದೆನೆ ಸೋದೊರ ವ(ಡಿ)ಯರ ರೇವಣಯ್ಯನಾಣ

ತಿಯಿಂ ಬೆಸವೋಜನ ಮಾಡಿಸಿದ ಬಸದಿ

ಯ ಭೋಗಕ್ಕೆಂದುತ್ತರಾಯಣ ಸಂಕ್ರಾನ್ತಿ ನಿಮಿ

ತ್ಯದಿಂ ಧಾರಾಪೂರ್ವ್ವಕದಿಂ ರಾಜಧಾನಿ ಪಿರಿಯ

ಮೊಸಂಗಿಯ ತೆಂಕವೊಲದೊಳ್ ದಯಗೆ

ಯ್ದು ಕೊಟ್ಟ ಕರಿಯ ನೆಲಂ ಮತ್ತರಯ್ವತ್ತು

ಅಕಡಿ ಮತ್ತ ೫೦ ದೀಪಕ್ಕೆ ನಡೆವ ಘಾಣ

ವೊಂದು ಪೂವಿನ ತೋಂಟ ಮತ್ತರೊಂದು

ಸಾಮಾನ್ಯೋಯಂ ಧರ್ಮ್ಮಸೇತು ನೃಪಾಣಾಂ ಕಾಳೇ

ಕಾಳೇ ಪಾಲನೀಯೋ ಭವದ್ಭಿಃ ಸರ್ವ್ವಾನೇತಾ

ನ್ಭಾಗಿನಪರ್ಥಿವೇನ್ದ್ರಾ ಭೂಯೋ ಭೂಯೋ

ಯಾಚತೇ ರಾಮಭದ್ರ ಶ್ರೀ ಶ್ರೀ

## ೮

## ತಡಕಲ್

### ಅಗಸಿಯ ಗೋಡೆಗೆ ಸೇರಿಸಿರುವ ಕಲ್ಲಿನ ಶಾಸನ

ಚಾಟುಕ್ಯಾಭರ(ಣಂ ಶ್ರೀಮ)ಜ್ಜ

ಗದೇಕಮಲ್ಲದೇವ(ರ ವಿಜಯರಾಜ್ಯ ಮು)

ತ್ತರೋತ್ತರಾಭಿವೃದ್ಧಿ .......(ಏತ)

ಗಿರಿಯ ನೆಲೆವೀಡಿನ .....

ಕತ ವಿನೋದದಿನಾ ಚಂ ..

ತಾರಂಬರಂ ಸಲುತ್ತಮಿರೆ.

ಮತ್ ಜಗದೇಕಮಲ್ಲದೇ ...

ವಿಶಾಳ ವಕ್ಷೋರಸ್ಥಳ ನಿ .

ಶಿನಿಯರಪ್ಪ ಶ್ರೀ ಬಿಜ್ಜಲ

ದೇವಿಯರ್ಸ್ವಕ ವರ್ಷ ೯೫೫

ನೆಯ ಶ್ರೀಮುಖ ಸಂವತ್ಸರದ

ಚೈತ್ರದಮವಾಸ್ಯೆ ಆದಿತ್ಯ

ಬಾರಂ ಸಂಕ್ರಾಂತಿ ವ್ಯ ...

ಸೂರ್ಯ್ಯಗ್ರಹಣ ಕಾಲ ..(ಅಗ್ರ?)

ಹಾರಂ ತಡಕ (ಲ)...

೬

## ಚೀಕಲಪರ್ವಿ

**ಊರ ಹೊರಗಿನ ಹೊಲದಲ್ಲಿನ ಶಾಸನ**

ನದನ ವೃಷ ಸಂವತ್ಸರದ ಶ್ರಾವಣ ಶುದ್ಧ ೧೨

ಸೋಮವಾರದಲು ಕೃಷ್ಣವಂಣ ಭೀಮರಥಿ

ಸಂಗಮದಲ್ಲಿ ರತ್ನದೇನು ಮಹಾದಾನವನು ಮಾ

ಡ ಚಿತ್ತೈಸಿ ತಂಮ ದೇವಿಯರು ಚಿಂನದೇವಿ

ಯಂಮನವರ ಕೈಯಲಿ ಗೋದಾನವನು | ತಿ

ರುಮಲದೇವಿಯಂಮನವರ ಕೈಯಲಿ ಕನಕಾ(ಶ್ರ) .

ದಾನ ಮಹಾದಾನವನು ಮಾಡಿಸಿ ಬಟ್ಟೆಸಿ .

ಮಾನುವೆಯ ಸೀಮೆಯ ಒಳಗೆ ಚಿಕಲಪರವಿ

ಗ್ರಾಮವನು ತಿರುವೆಂಗಳನಾಥನ ಅರ್ಘ್ಯ ..

ದಾ ಸಮಚ್ಛೆಯಸಿಯಧರ್ವಾದ ೬ ತಂಥಾ ಈ

ಸ್ಥಾಯಿ ಆಗಿ ಪಡೆದು ಕೊಂಡು ಕೊಟ್ಟ ಧೇನು ೧

೧೦

## ಕುರುಡಿ

### ಗ್ರಾಮದ ಅದೇ ಗುಡಿಯಲ್ಲಿರು ಮತ್ತೊಂದು ಶಾಸನ

ಗಂ ಸುರಪತಿಯಂಕ ಪೀಠಮನಳಂಕರಿಸಿರ್ದ್ಧಾ ಪ್ರಟೋ ಪುತ್ರಿಗಂ

ದೊರೆವಿಭು ಶಂಕರಾರ್ಯ್ಯನ ಮನಃಪ್ರಿಯೆ ನಾಗಲದೇವಿ ಪೆಂಪಿನೊಳ್ ||

ಮನುಚಾರಿತ್ರೆಯೆನಿಪ್ಪ ಸದುಗುಣಿ ಮಹಾದೇವಿಗಂ ಪುಣ್ಯ ಭಾ

ಜನ ನಿಂಬಪ್ರಭುಗೆ ಮಹೋತ್ಸವದಿಂ ಲಕ್ಷ್ಮೀದೇವಿ ವೊಲು ಪುಟ್ಟೆ ವಿಷ್ಣು

. ಶ್ರೀ ಮಹಾದೇವನೆಂಬನ ವಿಶಾಳೋರಸ್ಥಳ ಸ್ಥಾಯಿಯಾದನವದ್ಯಂ

. ಗೆ ಗಂಗಣಬ್ಬೆಗೆಣೆಯಾರು ವಿಶ್ವಂಭರಾಭಾಗದೊಳು || ದೊರೆ ಸುಮ

(ನೆ)ಗೆ ಶಾಂಡಿಲ್ಯಗೆ ಸರಿ ಸೀತೆಗೆ ಪಾಟಿ ಸಂದರುಂಧತಿಗೆಣೆ ಸಚ್ಚರಿತದೊಳಂ ಪ

ತಿಭಕ್ತಿಯ ಪರಿಣತಿಯೊಳಮೆಂದೊಡುಳಿದವರಾ ವಧುಗೆಣೆಯೆ || ನತರಿ

ಪು ಭೂಪ ನೂತ್ನ ಮಣಿ ಮೌಳಿಮಯೂಖನಖ ಪ್ರಸೂನ ರಂಜಿತ ಪದ

ಪಂಕಜಂ ದ್ರವಿಳವಿಪ್ರವರಾಳಿಗೆ ವಿಕ್ರಮಾಂಕ ಭೂಪತಿ ಪಡಿದಿತ್ತನು

ತ್ತಮಿಕೆಯಿಂ ನೆಗಳ್ದಯ್ಯಣವಾಡಿ ನಾಳ್ದಳಂಕ್ರಿತಿಯೆನೆ ಸಂದ ರೂಡಿ

ಯನದಂ ಸಲೆ ಸರ್ಬ್ಬನಮಸ್ಯಮಾಗಿರಲು ||

೧೧

## ಕುರುಡಿ

### ಗ್ರಾಮದ ರಾಮಲಿಂಗ ದೇವಾಲಯದ ಸಮೀಪದ ಬಂಡೆಯ ಮೇಲೆ

......ಮಹಾಸತಿ ರೆಬ್ಬಲದೇವಿ ......

ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ............

ಭುವನಮಲ್ಲದೇವರ ವಿಜಯರಾಜ್ಯ ಮುತ್ತರೋತ್ತರಾ ............

ದ್ಭೋಪಜೀವಿ ಸಮಧಿಗತ ಪಂಚಮಹಾಶಬ್ದ ಮಹಾ ...........

ಡ ದಂಡನಾಯಕ ರವಿಯಣ ಭಟ್ಟರು | ..........ದ್ಧ ೩ ವಡ್ಡವಾರ ..

ಷ್ಯ ತೃತೀಯಾ ಮಹಾಪರ್ವ ನಿಮಿತ್ತಂ ದೆಸ ..........

ವರ್ಗ್ಗೆ ಪೂಜೆ ಪುನಸ್ಕಾರಕ್ಕೆಂದು ಆಯೂರ .........

ತ್ತ ಕೇಶವದೇ(ವ)ರ ಕೋಲಲು ಬಿಟ್ಟ ನೆಲ ಮತ್ತರು .........

ಣಿಕೇಶ್ವರದ ಮತ್ತ ಯಿಪ್ಪತ್ತು ||

೧೨

## ಕಪಗಲ್ಲು

### ಈಶ್ವರನ ಗುಡಿಯ ಹತ್ತಿರ ಬಾವಿಯ ಸಮೀಪದ ಕಲ್ಲಿನ ಮೇಲೆ

ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರಂ

ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮದ್ಭುಧುವನೈ

ಕ ಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾನಮಾ ಚಂ

ದ್ರಾರ್ಕತಾರಂಬರಂ ಸಲುತ್ತಮಿರೆ ಕೆಱೆಯೂರ ನೆಲೆವೀಡಿನೊಳ್ ಸ್ವಸ್ತ್ಯನವರತ

ಪರಮಕಲ್ಯಾಣಾಭ್ಯುದಯ ಸಹಶ್ರಫಳ ಭೋಗಭಾಗಿನಿ ದ್ವಿತೀಯ ಲ

ಕ್ಷ್ಮೀ ಸಮಾನೆ ಗೋತ್ರನಿಧಾನೆ ಪರಿವಾರ ಚಿನ್ತಾಮಣಿ ವಿವೇಕ ಚೂಡಾಮಣಿ ಕಸ್ತೂ

ರಿಕಾಮೋದಿ ಗೀತವಿನೋದಿ ಮಲೆಪವೆಡಂಗಿ ಚಾಮಲದೇವಿಯರಣುಂಗಿ ಶ್ರೀಮ

ದ್ಭುವನೈಕಮಲ್ಲದೇವ ವಿಶಾಲವಕ್ಷಸ್ಥಳ ನಿವಾಸಿನಿಯರಪ್ಪ ಶ್ರೀಮತ್ಪಂಪಾ

ದೇವಿಯರ್ ಸಕವರ್ಷ ೯೯೧ ನೆಯ ಸೌಮ್ಯ ಸಂವತ್ಸರದ ಉತ್ತರಾಯಣ ಸಂಕ್ರಾನ್ತಿ

ತಿಥಿ ನಿಮಿತದಿಂ ಮೊಸಳಿಕಲ್ಲು ೩೦೦ರ ಬಳಿಯ ಕಂಪಣ ಗೋರಿಕಲ್ಲು ಪನ್ನೆರಡ

ಜೊಳಗಣ ಭತ್ತಗ್ರಾಮ ಕಪ್ಪಕಲ್ಲ ಭೋಗೇಶ್ವರ ದೇವರ್ಗ್ಗೆ ಮಱಿಚೇಡ ಬಟ್ಟೆಯಿಂ ಮೂಡ

ಲು ಪಡುವಲುವಾಗಿ ಸರ್ಬ್ಬಬಾದಾ ಪರಿಹಾರವಾಗಿ ಬಿಟ್ಟ ಕರಿಯನೆಲ ಮತ್ತ ..

೧೩

## ಬಲ್ಲಟಗಿ

ಮಸೀದಿಯ ಸಮೀಪದಲ್ಲಿ ನಿಲ್ಲಿಸಿರುವ ಕಲ್ಲಿನ ಎಡಭಾಗದ ಮೇಲೆ

ಸ್ವಸ್ತಿ ಶ್ರೀಮಚ್ಚಾಳುಕ್ಯ ವಿ

ಕ್ರಮ ವರ್ಷದ ೩ನೆಯ ವ್ಯ

ಯ ಸಂವತ್ಸರದ ಪುಷ್ಯ ಬಹುಳ

೧೩ (ದಸ) ಮಂಗಳವಾರದನ್ದುತ್ತರಾ

ಯಣ ಸಂಕ್ರಾನ್ತಿಯ ಪರ್ಬ್ಬ ನಿ

(ಮಿ)ತ್ತದಿಂ ಶ್ರೀ ಮಚ್ಚನ್ದಲದೇವಿಯ

(ರ್ ) ಬ್ರಹ್ಮಪುರಿ ಹೊಲ್ಲಿಮಯ್ಯ

ಧಾರಾಪೂರ್ವಕಂ ಮಾಡಿ ಸ

ರ್ಬ್ಬ ನಮಸ್ಯಮಾಗೆ ಬಳ್ಳನಿಟ್ಟಗೆ

ಯಲು ಪಿರಿಯಕೋ(ಲಲು) ಬಿಟ್ಟ

ಕರಿಯನೆಲಂ ಮತ್ತ ೨೪ ನಿವೇ

ಶನ ೧ ಮಲ್ಲಯ್ಯಂಗೆ ಬಿಟ್ಟ ಕರಿ

ಯ ನೆಲ ಮತ್ತ (೪)

೧೪

**ಗ್ರಾಮದ ಶಾಲೆಯ ಸಮೀಪದ ಕಲ್ಲಿನ ಮೇಲೆ**

ಸ್ವಸ್ತಿ ಸ ............

ಪದ ...........

ಶ್ರೀ ಮಜ್ಜಗದೇಕಮಲ್ಲ ದೇವರ ವಿಜಯ ........

ಮಾನಮಾ ಚನ್ದ್ರಾರ್ಕ್ಕತಾರಂಬರಂ ಸಲುತ್ತಮಿರೆ || ಸ್ವಸ್ತ್ಯನವರತ ಪರಮ

ಕಲ್ಯಾಣಾಭ್ಯುದಯ ಸಹಸ್ರಫಳ ಭೋಗಬಾಗಿನಿ ದ್ವಿತೀಯ ಲಕ್ಷ್ಮೀಸಮಾ

ನೆ ಕಾಮಧೇನು ಆಶ್ರಿತಜನಕಲ್ಪಲತೆ ಶ್ರೀಮಜ್ಜಗದೇಕಮಲ್ಲ ದೇವ ಪಾ

ದ ಪಂಕಜ ಭ್ರಮೆಯರಪ್ಪ ಶ್ರೀಮತ್ಸೋಮಲದೇವಿಯರ್ ಪನ್ದಿರ್ಕ್ಕೆಯ

ಪ್ರಯಣ ವೀಡಿನೊಳ್ ಸಕವರ್ಷ ೯೫೧ನೆಯ ಸುಕ್ಲ ಸಂವತ್ಸರ ಪುಷ್ಯ ಬಹುಳ

ಪಾಡಿವ ಬುಧವಾರದನ್ದುತ್ತರಾಯಣ ಸಂಕ್ರಾನ್ತಿಯ ಪರ್ವ್ವನಿಮಿತ್ತಂ ಎಡದೊಜೆಯಿ

ಚ್ಛಾಸಿರದೊಳಗಣ ಭತ್ತಗ್ರಾಮ ಬಳನಿಟ್ಟಗೆಯ ಬಸದಿಗೆಯಲ್ಲಿಯ

ಕಂಮತದೊಳಗೆ ಪಿರಿಯ ಕೋಲೊಳ್ ಬಿಟ್ಟ ಕರಿಯನೆಲಂ ಮ

ತ್ತರಿಪ್ಪತ್ತ ನಾಲ್ಕು ತೋಂಟ ಮತ್ತರೊನ್ದು ಮನೆಯಯ್ದು ಘಾಣವೊನ್ದು ||

೧೫

## ಮಲ್ಲಟ

**ಊರ ಹೊರಗಿನ ಅಲ್ಲಮ ದೇವಾಲಯದಲ್ಲಿರುವ ಕಲ್ಲಿನ ಮೇಲೆ**

ಪಾಳ || ಸ್ವಸ್ತಿ ಸಮಸ್ತ ನಿಜ ನಾಮಾಂಕ ಮಾಳಿಕಾ ಪ್ರಶಸ್ತಿ ಸಹಿತಂ ಶ್ರೀಮನ್ಮಹಾ

ಮಂಡಳೇಶ್ವರಂ ಹಲ್ಲೆಗದೇವಂಗೆ ಲೋ

ಕಾಂಬಿಕೆಯೆನಿಪ ಮಹಾಸತಿ ರೇಕಲದೇವಿಗಂ ಪುಟ್ಟಿದಾತ ಮಹಿಮೆಯೆಂತೆಂದಡೆ ||

ಗುಱುಗುಱಿಸಿದಡೊಱೆ

ನಟ್ಟಿದನುರದೆಕಳಂ ಬೇಳ್ವು ಕಾದದಿರ್ದ್ದಡೆ ಸುಟ್ಟಂ ಪೊಱವೊಳಲಂ ಮಲ್ಲನೃಪಂ ಕೊಱದಂ

ಹಂದಿಗನ ಹೊಲ್ಲ ರಂ

ಡೆಯ ತಲೆಯಂ || ಬಂದಂ ಮೊರಟದ ಮಲ್ಲಂ ಕೊಂದಪನೆಲೆ ಕಂದ ಹಂದ

ಹೋಗೆನುತಂ ತಾಂ ನಿಂದಾತ

ವೀರ ಬಿಜ್ಜಂ ಪಂದಲೆಯಂ ಕೊಟ್ಟು ತಂನ್ನ ಮಗನಂ ಕೊಂಡಂ || ಒಂದೇ

ಧನುವಿಂದೆ ಕುರುಬ್ರಿಂದಮ

೧೬

## ಬಾಗಲವಾಡ

**ಮಾನ್ವಿ ಕರಿಯಮ್ಮನ ಮನೆಯ ಸಮೀಪದ ಕಲ್ಲಿನ ಮೇಲೆ**

ರಂಗಧೀಱಂ ಶ್ರೀ ಮನ್ಮಲಯಮತಿದೇವಿಯರಂಕಕಾಱಂ ಶ್ರೀಮತ್ರಿಭುವನಮಲ್ಲದೇವ

ಪಾದಾರವಿನ್ದ

ಶಟ್ಟರಣನಯ್ಯ(ಣಾಭರ) ಣಂ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಮ

ಣ್ಡಳೇಶ್ವರನಯ್ಯಣದೇವರು ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತ ವಾ

ಚಂದ್ರಾರ್ಕ್ಕತಾರಂ ಸಲುತ್ತಮಿರೆ

ದುಷ್ಟ ನಿಗ್ರಹ ಶಿಷ್ಟ ಪ್ರತಿಪಾಳನೆಯಮ್ಮಾಡಿ ಶ್ರೀಮಚ್ಚಾಳುಕ್ಯ ವಿಕ್ರಮ ವರ್ಷದ

೨೦ ನೆಯ ಯುವ

ಸಂವತ್ಸರದ ಪೌಷ್ಯ ಶುದ್ಧ ೧೩ ಬೃಹಸ್ಪತಿವಾರದಂದು ಬಮ್ಮಟಿಪಾಟಿ ಪ್ರಭು ಗಾವುಣ್ಡಗಳ್ಗೆ

ಮೂರ್ತಿದೆಱೆ

# ಮುಕ್ಕುಂದಿ

## ಗ್ರಾಮದ ಸೋಮಲಿಂಗೇಶ್ವರ ದೇವಾಲಯದ ಎಡಭಾಗದಲ್ಲಿನ ಶಾಸನ

ನ್ನೆ ತಾಯಿ ನಾಗಿಣಿ ವಿಮಳ ನಿಜೋತ್ಪತ್ತಿಯಿಂ ತಾನೆಂಬಿನಂ ಭೋಗವತೀ

ಪುರವರಾಧೀಶ್ವರ ಸಿಂದ ಭೂ

ಪರಿಂ ತ್ಯಾಗಭೋಗಕ್ಕಂ ಮಾರ್ಪ್ಪಿಗಂ ನುಡಿಗಂ ಮುಖಾಳಾನನ್ನ ಸನ್ನೋಹದಿಂ ಭೋಗೇಂದ್ರ

ತಾನೆನೆಲು ಗೋನುಗ ನ್ರಿಪ

ನೆಸೆದ ವೀರನುರ್ವ್ವೀಲಲಾಮ ಚೋಳಬಳಂ ಪಡಲ್ಪಡೆಯು ಮುಪ್ಪುವ ತೂಣ್ಣ ಮಲೆಪರಾ

ಯಿರುಂಗೋಳರನೊಕ್ಕಲಿ

ಕ್ಕಿ ಕಲಿವಾಣರನ ತಲೆಗೊಣ್ಣುಗುರ್ಬ್ಬ ಭೂಪಾಳಕ ಗೋನಂಗೆಸೆಯ ಪೆಂಪಿನ ಪೊಂಪುಳೀ

ಯನ್ನೊಡಿಂನದಲೀಲೆ

ಯ ಮಾಲೆಯ ಪೊಗಳಲಾರ್ನ್ನೆಜೆವ ಕಲಿ ಗೋನಭೂಪನು | ಆತನ ತನೆಯ

ನಿಟೌವಿಖ್ಯಾತಂ

ಶಿಷ್ಟೇಷ್ಟದಾತನರಿಭೂಪ ಭಯೋತ್ಪಾತಂ ಶೌರ್ಯ್ಯದೊಳುಪಮಾತೀತಂ ಕಣ್ಣರಸನೆಸೆದ

ನವನೀತಳದೊಳು||

ಕ್ಷಿತಿಪತಿ ಕಣ್ಣರಸನ ಕುಲಪತಿ ಗುಣಪತಿ ರೂಪವತಿ ಯಶೋವತಿ ಭೋಗಾವತಿ ವಿಳಾಸವತಿ

ಮಹಿಮಾವತಿ ಕಾವಬ್ಬ

ರಸಿ ಗೌರಿಗೆಣೆಯೆನೆ ನೆಗಟ್ದಳು || ಕಣ್ಣನ್ರಿಪಂಗಮುತ್ತಮ ಪತಿವ್ರತೆ ತಾಂ ಕಾಮದೇವಿಗಂ

ಜಗಂ ಬಣ್ಣಿಸೆ ಪುಟ್ಟಿದಂ

೧೮

## ಮುಕ್ಕುಂದಿ

### ಗ್ರಾಮದ ಪಾಪಾನಾತೇಶ್ವರ ದೇವಾಲಯದ ಮುಂಭಾಗದಲ್ಲೆಟ್ಟಿರುವ ಶಾಸನ

ಚಂದ್ರಾರ್ಕ್ಕತಾರಂ ಸಲುತ್ತಮಿರೆ ಸ್ವಸ್ತನವರತ ಪರಮ

ಕಲ್ಯಾಣಾಭ್ಯುದಯ ಸಹಸ್ರಫಳ ಭೋಗ ಭಾಮಿನೀ

ದ್ವಿತೀಯ ಲಕ್ಷ್ಮೀಸಮಾನೆ ಶ್ರೀಮದಾಹವ ಮ

ಲ್ಲದೇವ ಚಿತ್ತಾಮ್ರಿತವಾರ್ಧ್ಧಿವರ್ದ್ಧನಪೂರ್ಣೇನ್ದೂಪ

ಮಾನೆ ತ್ರೈಲೋಕ್ಯಮಲ್ಲದೇವ ವಿಶಾಲವಕ್ಷ

ಸ್ಥಳ ಕ್ರೀಡಾವಿಳಾಸ ಶ್ರೀಕಾಂನ್ತೆ ಚರಣಸರೋರು

ಹಾನನತಿಕ್ರಿತಿ ಸಕಳ ಸುದ್ದಾಂನ್ತೆ ಸರ್ವ್ವಾರ್ತ್ಥಸಾರ್ತ್ಥ ಚಿಂತಾ

ಮಣಿ ಸೌಭಾಗ್ಯಸಾರ ಸರ್ವಸ್ವ ಲಲನಾ ಚೂಡಾಮಣಿ ಪ್ರ

ತ್ಯಕ್ಷ ಪಾರ್ವ್ವತಿತ್ಯಖಿಳಂ ಸ್ವತ್ರ್ತಭಿದಾನ ಪೂಜಿತೆಯರು ಮ

ಗ್ರಮಹಿಷಿ ಪರವಿರಾಜಿತಯರುಮಪ್ಪ ಶ್ರೀಮತ್ರೈ

ಳೋಕ್ಯ ಮಹಾದೇವಿಯರು ಕಲ್ಯಾಣದ ನೆಲೆವೀ

ಡಿನೊಳು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ

೧೯

## ಜಾಲಿಹಾಳು

### ಗ್ರಾಮದ ಈಶ್ವರದೇವರ ಗುಡಿಯ ನವರಂಗದ ಗೋಡೆಯಲ್ಲಿನ ಶಾಸನ

ಆ ರಾಜನ ಕುಲಲಲನೆ ಸುಧಾರೋಚಿತವದನೆ ಬನ್ದುಚಿನ್ತಾಮಣಿ ಯಂಭೋರುಹ

ದಳಾಕ್ಷಿ ಗುಣದೊಳು ಭೂಮಿಯ ಮಹಾಸತಿಯೆ ಜಕ್ಕಣಾಂಬಿಕೆ ನೆಗಟ್ದಳು || ಆ ರಾಜಿಮ

ಯ್ಯ ವಿಭುಗಂ ಧಾರಿಣಿಯೊಳು ನೆಗಳ್ದ ಜಕ್ಕಣಬ್ಬೆಗವಮ್ರಿತಾಂಭೋರಾಸಿಯೊಳುದಿಯಿಸಿದಂ

ಮಹಾರತ್ನದ ದೊರೆಗೆ ಪುಟ್ಟಿದರ್ಸ್ವತುಪುತ್ರರು || ಪಿರಿಯ ನೇಮಣ ಭೂಚಣಂ

ಕುಸುವಣಂ ತಮ್ಮಂ

## ೨೦

## ದಿದ್ದಿಗಿ

**ಊರಿನ ಸಮೀಪದಲ್ಲಿ ಬಸಮ್ಮಾಗೊಲ್ಲರ್ ಅವರ ಹೊಲದಲ್ಲಿನ ಶಾಸನ**

ಖಮಾಗೆ ನೂಜೆಣ್ಕರು ಧಾರಾಪೂರ್ವ್ವಕದಿಂ ಗ್ರಾಮ ದೆಟ್ದಿಗಿ

ಬಿಟ್ಟ ದತ್ತಿ ಯೆನ್ತೆನ್ಡಡೆ ವಿಷ್ನುದೇವರ್ಗೆ ಮ ೧ . ಗಟ್ದೆ ಕಮ್ಮ

ಳ೫೦ ಸುಬ್ರಮಣ್ಯದೇವರ್ಗ್ಗೆ ಮ ೧೩ ರಾಮೇಸ್ವರದೇವರ್ಗ್ಗೆ ಮ ..

ಸೋಮೇಶ್ವರದೇವರ್ಗ್ಗೆ ಮ ೨೩ ತೋಂಟ ಮ ೧ ಚಿಕ್ಕ ಬಿಕೇಸ್ವದೇವರ್ಗ್ಗೆ

ಮ ೭ ಬಳರಿ ಮಾರಕಬ್ಬೆಗೆ ಮ ೩ ಭಳರಿ ಪಿರಿಯಕಬ್ಬೆಗೆ ಮ ..

ಸತ್ರಕೆ ಮ ೪ ಸರಸ್ವತಿಗೆ ಮ . ಭಟ್ಟರೆಯ ಮ ೧೩ ಯ

ಟ್ಟಗೆಯಿ ೧೩ ಮೆಲ್ದನಾಪಾರು ಕೆಯ ಬಿಟ್ಟ ಕೊಟ್ಟ ನೂರೆಣ್ದರ

ಮೆಂಬಿದೆಲ್ಲ ಸಿದ್ಧಾಯ ಕೊಟ . ಲ . ಗೆ . ಪೊನ್ನನಿಕ್ಕುವರು

# ಗ್ರಂಥಋಣ

ಅಮರೇಶ್ ಯತಗಲ್, **ಇತಿಹಾಸ ಇಂಚರ**, ಅದಿತಿ ಪ್ರಕಾಶನ, ಲಿಂಗಸೂಗೂರು, ೨೦೦೭

ಕಲಬುರ್ಗಿ ಎಂ.ಎಂ., **ಶಾಸನಗಳಲ್ಲಿ ಶಿವಶರಣರು** ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ, ೧೯೭೦

ಕೋದಂಡರಾಮ ಎನ್.ಕೆ., **ಮಹಿಳೆ ಮತ್ತು ಸಾಮಾಜಿಕತೆ**, ಶ್ರೀಮತಿ ಯಶೋದಾ ರಾಗೌ ಟ್ರಸ್ಟ್, ಮೈಸೂರು, ೨೦೦೫

ಚನ್ನಬಸವಪ್ಪ ಎಸ್.ಪಾಟೀಲ್, **ಕರ್ನಾಟಕ ಕೋಟೆಗಳು**, ಸಂ.೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ಚನ್ನಬಸವ ಹಿರೇಮಠ, **ಎಡದೊರೆ ನಾಡು**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಚನ್ನಬಸವ ಹಿರೇಮಠ, **ರಾಯಚೂರು ಕೊಪ್ಪಳ ಜಿಲ್ಲೆಯ ಶಾಸನಗಳು**, ಚೇತನ ಪ್ರಕಾಶನ, ಮಸ್ಕಿ, ೧೯೯೯

ಚಿದಾನಂದ ಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಸ್ವಪ್ನ ಬುಕ್ ಹೌಸ್ , ಬೆಂಗಳೂರು, ೨೦೦೨

ಚೆನ್ನಕ್ಕ ಪಾವಟೆ, **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೦

ಚೆನ್ನಕ್ಕ ಪಾವಟೆ, **ಕರ್ನಾಟಕ ಶಾಸನೋಕ್ತ ಮಹಿಳೆ(ಸಮೀಕ್ಷೆ-ಸಂಸ್ಕೃತಿ)**, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೨೦೦೭

ಜ್ಯೋತ್ಸ್ನಾ ಕಾಮತ್, **ಮಹಿಳೆ ಒಂದು ಅಧ್ಯಯನ**, ನವ ಕರ್ನಾಟಕ ಪ್ರಕಾಶನ, ೧೯೯೯

ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೧೯೯೭

ನಾಗಯ್ಯ ಜೆ.ಎಂ., ಆರನೆಯ ವಿಕ್ರಮಾದಿತ್ಯನ ಶಾಸನಗಳ ಒಂದು ಅಧ್ಯಯನ, ವೀರಶೈವ ಅಧ್ಯಯನ ಅಕಾಡಮಿ, ಬೆಳಗಾವಿ, ೧೯೯೨

ನಾಗಯ್ಯ ಜೆ.ಎಂ., ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಲೋಹಿಯಾ ಪ್ರಕಾಶನ, ಬಳ್ಳಾರಿ ೨೦೦೨

ನಾಗಭೂಷಣ ಸಿ., ಕನ್ನಡ ಸಾಹಿತ್ಯ ಸಂಸ್ಕೃತಿ ಶೋಧನೆ, ಅಮೃತವರ್ಷಿಣಿ ಪ್ರಕಾಶನ, ನಂದಿಹಳ್ಳಿ ಸಂಡೂರು, ೧೯೯೯

ನಾಗಭೂಷಣ ಸಿ., ಸಾಹಿತ್ಯ ಸಂಸ್ಕೃತಿ ಹುಡುಕಾಟ, ಅಮೃತವರ್ಷಿಣಿ ಪ್ರಕಾಶನ, ಯರಗೇರಾ, ರಾಯಚೂರು, ೨೦೦೨

ನಾಗಭೂಷಣ ಸಿ., ಶಾಸನಗಳು ಮತ್ತು ಕನ್ನಡ ಸಾಹಿತ್ಯ ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫

ಪರಮಶಿವಮೂರ್ತಿ ಡಿ.ವಿ., ಕನ್ನಡ ಶಾಸನ ಶಿಲ್ಪ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ಪರಮಶಿವಮೂರ್ತಿ ಡಿ.ವಿ., ಪ್ರೌಢದೇವರಾಯನ ಶಾಸನಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

ಶೇಷಶಾಸ್ತ್ರಿ ಆರ್., ಕರ್ನಾಟಕ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪

ಶೇಠ್, ಬಿ.ಎಸ್., ಕರ್ನಾಟಕದಲ್ಲಿ ಸತಿ ಪದ್ಧತಿ, ವೀರಶೈವ ಅಧ್ಯಯನ ಅಕಾಡಮಿ, ಬೆಳಗಾವಿ, ೧೯೯೧

ಹನುಮಾಕ್ಷಿ ಗೋಗಿ, ಅನುಶಾಸನ, ಮಹಿಳಾ ಸಾಹಿತ್ತಿಕಾ, ನವನಗರ ಹುಬ್ಬಳ್ಳಿ, ೨೦೦೨

ಹನುಮಾಕ್ಷಿ ಗೋಗಿ, ಕಲ್ಬುರ್ಗಿ ಜಿಲ್ಲೆಯ ಶಾಸನಗಳು, ಶಿವಚಂದ್ರ ಪ್ರಕಾಶನ ಹುಬ್ಬಳ್ಳಿ, ೧೯೯೬

ಹಿರೇಮಠ ಬಿ.ಆರ್., ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಕರ್ನಾಟಕ ವಿಶ್ವವಿದ್ಯಾಲಯ, ಧಾರಾವಾಡ, ೨೦೦೦

ಹಿರೇಮಠ ಎಸ್.ಎಂ., ಶಾಸನ ಪರಿಭಾಷೆ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೫-೦೬

## ಸಂಪಾದಿತ ಕೃತಿಗಳು

ಕಮಲಾ ಹಂಪನಾ, ಬೊಗಸೆ (ಮಹಿಳೆ ಸುತ್ತ-ಮುತ್ತ), ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩

ಪದ್ಮ ಎಂ., "ವಿಜಯನಗರ ಶಾಸನಗಳಲ್ಲಿ ಮಹಿಳೆ" ವಿಜಯನಗರ ಅಧ್ಯಯನ ಸಂಪುಟ-೧, ಸಂ. ದೇವರಾಜ್ ಡಿ.ವಿ., ಚೆನ್ನಬಸವಪ್ಪ ಎಸ್. ಪಾಟೀಲ್, ಪ್ರಾಚ್ಯವಸ್ತು ಸಂಗ್ರಹಾಲಯ, ಮೈಸೂರು, ೧೯೯೫

ಮೃತ್ಯುಂಜಯ ಹೊರಕೇರಿ, ಬಸವಲಿಂಗ ಸೊಪ್ಪಿಮಠ, ರಾಯಚೂರು ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫

ಲಕ್ಷ್ಮಣ ತೆಲಗಾವಿ, ಹರತಿ ಸಿರಿ, ಹೆಚ್.ವಿ.ವೀರನಾಯಕ ಹರತಿ, ನೆನಪಿನ ಸಂಪುಟ, ೧೯೮೭

ಶಾಶ್ವತಸ್ವಾಮಿ ಮುಕ್ಕುಂದಿಮಠ, ಕೃಷ್ಣ ತುಂಗೆ ನೆಲದ ಸಿರಿ, ಸುಮುಖ ಪ್ರಕಾಶನ, ಬೆಂಗಳೂರು, ೨೦೦೮

ಸರಸ್ವತಿ ಎನ್., *ವಿಜಯನಗರ ಕಾಲದಲ್ಲಿ ಉದ್ಯೋಗಸ್ಥ ಮಹಿಳೆಯರು,* ವಿಜಯನಗರ ಅಧ್ಯಯನ ಸಂಪುಟ ೩, ಸಂ.ಎಂ.ಎಲ್.ಶಿವಶಂಕರ, ಚೆನ್ನಬಸವಪ್ಪ ಎಸ್.ಪಾಟೀಲ್, ಪ್ರಾಚ್ಯವಸ್ತು ಸಂಗ್ರಹಾಲಯ, ಮೈಸೂರು, ೧೯೯೭

**ಶಾಸನ ಸಂಪುಟಗಳು**

ಇತಿಹಾಸ ದರ್ಶನ ಸಂಪುಟಗಳು ೧-೨೩, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

ಉರ್ದು, ಅರೇಬಿಕ್, ಪರ್ಶಿಯನ್ ಶಾಸನಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಯಾಸೀನ್ ಎಂ.ಖುದ್ದೂಸಿ, ಸೀತಾರಾಮ್ ಜಾಗೀರದಾರ್ , ೨೦೦೧

ಎಪಿಗ್ರಾಫಿಯಾ ಕರ್ನಾಟಕ ಸಂಪುಟಗಳು, ಪ್ರಾ.ಮೈಸೂರು ವಿಶ್ವವಿದ್ಯಾಲಯ, ಮೈಸೂರು

ಎಪಿಗ್ರಾಫಿಯ ಇಂಡಿಕಾ ಸಂಪುಟಗಳು, ಭಾರತ ಶಾಸನ ಇಲಾಖೆ ಮೈಸೂರು

ಎಸ್.ಐ.ಐ.ಸಂಪುಟಗಳು, ಭಾರತ ಶಾಸನ ಇಲಾಖೆ, ಮೈಸೂರು

ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೭, ರಾಯಚೂರು ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಡಾ. ದೇವರ ಕೊಂಡಾರೆಡ್ಡಿ, ಡಾ.ಕೆ.ಜಿ.ಭಟ್ ಸೂರಿ, ಡಾ. ಪರಮಶಿವಮೂರ್ತಿ ಡಿ.ವಿ., ಡಾ. ಕಲವೀರ ಮನ್ವಾಚಾರ್, ೨೦೦೩

ಕರ್ನಾಟಕ ಚರಿತ್ರೆ ಸಂಪುಟಗಳು ೧-೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

ಹೈದರಾಬಾದ್ ಕರ್ನಾಟಕ ಆರ್ಕಿಯಾಲಾಜಿಕಲ್ ಸಿರೀಸ್, ಆಂದ್ರಪ್ರದೇಶ

# ಛಾಯಚಿತ್ರಗಳು



ನವರಂಗ ದರ್ವಾಜಾ ರಾಯಚೂರು



ರಾಯಚೂರು ಕೋಟೆ



ರಾಯಚೂರು ಕೋಟೆ



ಮಲಿಯಾಬಾದಿನಲ್ಲಿರುವ ಕಲ್ಲಾನೆಗಳ ಚಿತ್ರ



ಶಂಕರೇಶ್ವರ ಗುಡಿಯ ಶಾಸನ ಕುರುಡಿ



ಗಬ್ಬೂರಿನ ಲಕ್ಷ್ಮಿ ವೆಂಕಟೇಶ್ವರ ದೇವಾಲಯದ ಶಾಸನ



ಜೇಡರದಾಸಿಮಯ್ಯನ ಹೆಂಡತಿಯ
ಹೆಸರನ್ನು ಪ್ರಸ್ತಾಪಿಸುವ ಶಾಸನ ಗಬ್ಬೂರು



ಸಕಲೇಶ ಮಾದರಸನನ್ನು ಉಲ್ಲೇಖಿಸುವ
ಅಲ್ಲಮಪ್ರಭು ದೇವಾಲಯದಲ್ಲಿಯ ಶಾಸನ ಗಬ್ಬೂರ



ಕವಿತಾಳದ ತ್ರಯಂಬಕೇಶ್ವರ ದೇವಾಲಯದ
ಒಳಭಾಗದಲ್ಲಿರುವ ಶಾಸನ



ವೀರ ಮಹಾಸತಿ ಕ್ಯಾದಿಗ್ಗೇರಾ



ಮುಕ್ಕುಂದಿಯ ಮುರಾರಿ ದೇವಾಲಯದ
ನವರಂಗದ ಬಲಬದಿಯ ಶಾಸನ



ವೀರ ಮಹಾಸತಿ ಶಿಲ್ಪ ಕ್ಯಾದಿಗ್ಗೇರಿ



ವೀರ ಸ್ಮಾರಕ ಶಿಲ್ಪ ಕ್ಯಾದಿಗ್ಗೇರಾ



ಮಹಾಸತಿ ಶಿಲ್ಪ ಅರಕೇರಿ



ಮಹಾಸತಿ ಶಿಲ್ಪ ಹುನುಗುಂದಾ ಬಾಡಾ



ಚಂದನಕೇರಿಯಲ್ಲಿರುವ ಕಲ್ಯಾಣಚಾಳುಕ್ಯರ
ಕಾಲದ ಭದ್ರಕಾಳಿಯ ಶಿಲ್ಪ



ಕ್ಯಾದಿಗ್ಗೆರೆಯ ವೀರಗಲ್ಲಿನ ಶಿಲ್ಪ



ವೀರ ಮಹಾಸತಿ ಶಿಲ್ಪ ಕ್ಯಾದಿಗ್ಗೇರಾ



ಅರಕೇರದಲ್ಲಿಯ ಯುದ್ಧಕ್ಕೆ ಸಿದ್ಧನಾಗಿರುವ
ದಂಡನಾಯಕನ ಶಿಲ್ಪ



ಅರಕೇರದ ವೀರಗಲ್ಲಿನ ಮೇಲುಭಾಗದ ಶಿಲ್ಪ



ಕವಿತಾಳದ ತ್ರಯಂಬಕೇಶ್ವರ ದೇವಾಲಯದ
ಬಳಿಯಿರುವ ಸಪ್ತಮಾತೃಕೆಯರು

